ಪ್ರತಿಭಾಗ್ರಂಥಮಾಲಾ, ಧಾರವಾಡ. ಕಿರಣ ೨

# ರಾಜಲಕ್ಷ್ಮಿ

## ಸತ್ಯೇಂದ್ರನಾಥ ∴ ಬೆಳಕು-ನೆಳಲು ∴ ಬಿಲಾಸಿ

( ಶರತ್ ಬಾಬುಗಳ ನಾಲ್ಕು ನೀಳ್ಗತೆಗಳು )



ಅನುವಾದಕರು.-

**ಶ್ರೀ ಗುರುನಾಥ ಜೋಶಿ**

ತಾ. ೧೦-೪-೧೯೪೪ ಬೆಲೆ ೧-೮-೦

# ಮುನ್ನುಡಿ

'ರಾಜಲಕ್ಷ್ಮಿ'ಯು ಮೊದಲು **ಪ್ರತಿಭಾ ಗ್ರಂಥಮಾಲೆ**ಯಲ್ಲಿ ಸೇರಿದ ಬಳಿಕ **ಭಾರತೀಯ ಸಾಹಿತ್ಯ ಮಂದಿರ**ದಲ್ಲಿ ಪ್ರವೇಶಿಸಲು ಹೊರಟಂತೆ ಆಗಿದೆ. ಈ ಮೊದಲು 'ರಾಜಲಕ್ಷ್ಮಿ'ಯನ್ನು 'ಭಾರತೀಯ ಸಾಹಿತ್ಯ ಮಂದಿರ'ದ ಪ್ರಕಟನೆಯಾಗಿ ಪ್ರಸಿದ್ಧಿಸಬೇಕೆಂದು ನಿಶ್ಚಯಿಸಿದ್ದೆ, ಆದರೆ, ನನ್ನ ಬಾಲ್ಯ ಸ್ನೇಹಿತರಾದ ಶ್ರೀ. ಭಾಲಚಂದ್ರ ಘಾಣೇಕರ ಅವರು ಗಂಟುಬಿದ್ದು ತಮ್ಮ ಮಾಲೆಯಲ್ಲಿ ಪ್ರಕಟಿಸಲು ಒಯ್ದುಬಿಟ್ಟರು. ಇನ್ನೂ ಮೂರು ಕತೆಗಳನ್ನು ಅನುವಾದಿಸಲು ಬಿನ್ನವಿಸಿಕೊಂಡರು. ಅವರ ಬಿನ್ನಹಕ್ಕೆ ಮನ್ನಣೆಯಿತ್ತು **ಭಾರ** (ಸತ್ಯೇಂದ್ರನಾಥ), **ಪ್ರಕಾಶ ಮತ್ತು ಛಾಯಾ** (ಬೆಳಕು–ನೆಳಲು), ಮತ್ತು **ಬಿಲಾಸಿ** ಈ ಮೂರು ಕತಗಳನ್ನೂ ಅನುವಾದಿಸಿಕೊಟ್ಟನು '**ಹರಿಲಕ್ಷ್ಮಿ**'ಯು 'ರಾಜಲಕ್ಷ್ಮಿ'ಯಾಗಿದ್ದಾಳೆ ನನ್ನ ಅನುವಾದದಲ್ಲಿ

ದಿವಂಗತ ಶರತ್ ಬಾಬುಗಳ ಕೃತಿಗಳನ್ನು ಕುರಿತು ನಾನು ವಿಶೇಷವಾಗಿ ಏನನ್ನೂ ಹೇಳಬೇಕಾಗಿಲ್ಲ. ಅನುವಾದವನ್ನು ಕುರಿತು ಏನನ್ನೂ ನನಗೆ ಹೇಳುವ ಮನಸಿಲ್ಲ. ನನ್ನ ಹೃದಯದ ತಂತಿಗಳನ್ನು ಮೀಂಟಿದ ಕತೆಗಳನ್ನು ಇಲ್ಲಿ ಅನುವಾದಿಸಿ ಕೊಟ್ಟಿರುವೆ. ಓದುಗರ ಎದೆಯ ತಂತಿಗಳನ್ನು ಇವು ಮೀಂಟಿದರೆ ಸಾಕು, ನನ್ನ ಅನುವಾದ ಸಾರ್ಥಕವಾಯಿತೆಂದು ನಾನು ಬಗೆಯುವೆ.

ಪ್ರತಿಭಾ ಗ್ರಂಥಮಾಲೆಯಲ್ಲಿ ದಿ|| ಶರತ್ ಬಾಬುಗಳ ಕೃತಿಗಳನ್ನು ಸೇರಿಸಿಕೊಂಡುದಕ್ಕಾಗಿ ಶ್ರೀ. ಭಾಲಚಂದ್ರ ಘಾಣೇಕರ ಅವರಿಗೂ ದಿ|| ಶರತ್ ಬಾಬುಗಳ ಎಲ್ಲ ಕೃತಿಗಳನ್ನು ಅನುವಾದಿಸಲು ಮುಂಬಯಿಯ ಹಿಂದೀ ಗ್ರಂಥ ರತ್ನಾಕರ ಕಾರ್ಯಾಲಯದವರಿಂದ ಒಪ್ಪಿಗೆಯನ್ನು ಒದಗಿಸಿ ಕೊಟ್ಟ ಶ್ರೀ. ಸಿದ್ಧನಾಥ ಪಂತರಿಗೂ ನಾನು ಕೃತಜ್ಞ.

—**ಗುರುನಾಥ ಜೋಶಿ**

# ಪ್ರಕಾಶಕರ ಮಾತು

ಪ್ರತಿಭಾ ಗ್ರಂಥಮಾಲೆಯ ಎರಡನೇ ಕಿರಣವಾದರೂ ಬೇಗನೆ ಬೆಳಕಿಗೆ ಬಂದುದಕ್ಕಾಗಿ ನಮಗೆ ತುಂಬಾ ಸಂತೋಷವಾಗಿದೆ. ವಾಚಕರಿಗಾದರೂ ಅಷ್ಟೇ ಸಂತೋಷವಾಗುವದೆಂಬುವದರಲ್ಲಿ ಸಂದೇಹವಿಲ್ಲ.

ಗೆ| ಗುರುನಾಥ ಜೋಶಿಯವರು ನಮ್ಮ ಬಿನ್ನಹಕ್ಕೆ ಮನ್ನಣೆಯಿತ್ತು ಸಕಾಲಿಕ್ಕ ಈ ಸತ್ಕೃತಿಗಳ ಸಂಗ್ರಹವನ್ನು ಒದಗಿಸಿ ಕೊಟ್ಟುದಕ್ಕಾಗಿ ಅವರಿಗೆ ತುಂಬಾ ಆಭಾರಿಯಾಗಿದ್ದೇವೆ. ವಂಗ ಸಾಹಿತ್ಯ ಸಾಮ್ರಾಟರೆನಿಸಿಕೊಂಡ ದಿ|| ಶರಚ್ಚಂದ್ರ ಚಟರ್ಜಿಯವರ ಕಥೆಗಳನ್ನು ಮೆಚ್ಚದ ಭಾರತೀಯನಿಲ್ಲ. ಶ್ರೀ. ಗುರುನಾಥ ಜೋಶಿಯವರ ಸುಲಭ-ಸಹಜವಾದ ಸುಂದರ ಶೈಲಿಯ ಒಪ್ಪ ಬೇರೆ ಅದಕ್ಕೆ. ಅಂದಬಳಿಕ ಕನ್ನಡಿಗರಲ್ಲ ಈ 'ಪ್ರತಿಭಾ ಕಿರಣವನ್ನು' ಮೆಚ್ಚದಿರಲಾರರೆಂದು ನಾವಂತೂ ಪೂರ್ಣ ನಂಬಿದ್ದೇವೆ.

ಈ ಪುಸ್ತಕವನ್ನು ಅಚ್ಚು ಮೆಚ್ಚಾಗಿ ಮುದ್ರಿಸಿ ಕೊಟ್ಟ ಸಾಧನ ಮುದ್ರಣಾಲಯದ ಒಡೆಯರಿಗೂ ಶರಚ್ಚಂದ್ರರ ಪಡಿಯಚ್ಚನ್ನು ಕೊಟ್ಟು ನೆರವಾದ ಹುಬ್ಬಳ್ಳಿಯ ಸಾಹಿತ್ಯ ಭಾಂಡಾರದ ಒಡೆಯರಿಗೂ ಅತ್ಯಂತ ಉಪಕೃತರಾಗಿದ್ದೇವೆ

—ಭಾಲಚಂದ್ರ ಘಾಣೇಕರ

# ರಾಜಲಕ್ಷ್ಮಿ

## ೧

ರಾಜಲಕ್ಷ್ಮಿಯ ಜೀವನದಲ್ಲಿ ಜರುಗಿದ ಒಂದು ಚಿಕ್ಕ ಸಂಗತಿಯಿಂದ ಈ ಕತೆಯು ಹುಟ್ಟಿದೆ. ಆ ಸಂಗತಿ ಅಷ್ಟು ಚಿಕ್ಕದು ಇರಲಿಲ್ಲ, ತುಚ್ಛವಾದುದೂ ಇರಲಿಲ್ಲ. ಒಂದು ನದಿಯ ದಂಡೆಯ ಬಳಿ ಒಂದು ಹಡಗವೂ ಒಂದು ಚಿಕ್ಕ ದೋಣಿಯೂ ಅಕ್ಕಪಕ್ಕದಲ್ಲಿ ಕಟ್ಟಿದ್ದುವು. ಅಕಸ್ಮಾತ್ ಒಂದು ಬಿರುಗಾಳಿಯೆದ್ದು ನದಿಯಲ್ಲಿ ಅಲ್ಲೋಲ ಕಲ್ಲೋಲವಾಗಿ ಹೋಯಿತು. ಹಡಗವು ಬಿಚ್ಚಿತು, ದೋಣಿಯು ಅದರೊಡನೆ ತಾಕಲಾಡಿ ಒಡೆದು ಚೂರು ಚೂರಾಗಿ ಹೇಳಹೆಸರಿಲ್ಲದಂತೆ ನಾಶವಾಗಿ ಹೋಯಿತು. ಜೀವನದಲ್ಲಿಯೂ ಪ್ರಪಂಚದಲ್ಲಿಯೂ ಆಗುವುದೇ ಹೀಗೆ.

ಬೇಲಪುರ ತಾಲೂಕು ಅಷ್ಟು ಚಿಕ್ಕದೂ ಅಲ್ಲ, ದೊಡ್ಡದೂ ಅಲ್ಲ. ರೈತರನ್ನು ಎಷ್ಟು ಕಾಡಿದರೂ ವರ್ಷಕ್ಕೆ ಹನ್ನೆರಡು ಸಾವಿರ ರೂಪಾಯಿಗಿಂತ ಹೆಚ್ಚು ಕಂದಾಯ ವಸೂಲಾಗುವುದಿಲ್ಲ. ಈ ಊರಿನ ಜಮೀನುದಾರರು ಶಿವಚರಣರು ಮತ್ತು ವಿಪಿನ ಬಿಹಾರಿ ಅವರು. ಶಿವಚರಣರು ಹದಿನೈದುವರೆ ಆಣೆಯ ಪಾಲುಗಾರರು, ವಿಪಿನ ಬಿಹಾರಿಯು ಮಾತ್ರ ಎರಡು ಬಿಲ್ಲೆಯ ಪಾಲುಗಾರ. ಇವರಿಬ್ಬರನ್ನೂ ದೊಡ್ಡ ಹಡಗು ಮತ್ತು ಚಿಕ್ಕ ದೋಣಿಗೆ ಹೋಲಿಸಿದರೆ ಅತಿಶಯೋಕ್ತಿಯು ಆಗಲಾರದು.

ದೂರದ ಸಂಬಂಧವಿದ್ದರೂ ಇರ್ವರೂ ಒಂದೇ ಗೋತ್ರದವರು, ಒಂದೇ ಕುಲದವರು. ಇರ್ವರ ಜಮೀನುದಾರಿಯ ಸಂಸ್ಥಾನವು ಏಳು ಎಂಟು ತಲೆಗಳ ಮೊದಲು ಒಂದೇ ಆಗಿದ್ದಿತು. ಆದರೆ ಈ ದಿನ ಒಬ್ಬರ

ಮನೆಯು ಮೂರು ಅಂತಸ್ತಿನದು, ಇನ್ನೊಬ್ಬರದು ಹೆಂಚಿಯದು ಇದೆ. ಈ ರೀತಿಯಾಗಿ ದಿನಗಳು ಮುಂದುವರಿಯುತ್ತಿರುವಾಗ ಒಂದು ದೊಡ್ಡ ಬಿರುಗಾಳಿಯೆದ್ದಿತು ಮತ್ತು ಎಲ್ಲವೂ ತಲೆ ಕೆಳಕಾಗಿ ಹೋಯಿತು. ಅದರ ಕತೆಯು ಹೀಗಿದೆ:—

ಹದಿನೈದುವರೆ ಆಣೆಯ ಪಾಲುಗಾರ ಶಿವಚರಣರ ಹೆಂಡತಿ ಅಕಸ್ಮಾತ್ ಅಕಾಲ ಮೃತ್ಯುವಿಗೆ ತುತ್ತಾದಳು. ಆಗ ಶಿವಚರಣರಿಗೆ ನಾಲ್ವತ್ತು ನಾಲ್ವತ್ತೊಂದು ವಯಸ್ಸು. ಗೆಳೆಯರು ಇನ್ನೊಂದು ಮದುವೆ ಮಾಡಿಕೊಳ್ಳಲು ಹೇಳಿದರು. ಶತ್ರುಗಳು 'ಶಿವಚರಣರಿಗೆ ನಾಲ್ವತ್ತು ವರ್ಷ ವಯಸ್ಸು ಎಂದೋ ಆಗಿದೆ!' ಎಂದು ನಗೆಯಾಡತೊಡಗಿದರು. ಇವೆರಡೂ ಮಾತುಗಳಲ್ಲಿ ಹುರುಳಿಲ್ಲ. ಹುರುಳಿನ ಮಾತು ಎಂದರೆ ಇದು— ಅವರ ದೇಹವು ಹುರಿಕಟ್ಟಾಗಿದ್ದಿತು, ಮುಖವು ತುಂಬಿಕೊಂಡಿದ್ದಿತು. ಕೂದಲೂ ಬೆಳ್ಳಗಾಗಿರಲಿಲ್ಲ. ಆದುದರಿಂದ ಅವರ ವಯಸ್ಸನ್ನು ಕಟ್ಟಲು ಜನರಿಗೆ ಸ್ವಲ್ಪ ತೊಂದರೆಯಾಗುತ್ತಿದ್ದಿತು. ಆದರೆ ಅವರಿಗೇ ತಮ್ಮ ವಯಸ್ಸು ಗೊತ್ತಿರಲಿಲ್ಲ. ಇರಲಿ, ಶ್ರೀಮಂತರ ಮದುವೆಯು ವಯಸ್ಸನ್ನು ಅವಲಂಬಿಸಿಲ್ಲ. 'ಬೇಡ ಬೇಡ' ಎಂದು ದುಃಖದಲ್ಲಿ ಎರಡು ತಿಂಗಳುಗಳು ಕಳೆದುವು. ಬಳಿಕ ಶಿವಚರಣರು ರಾಜಲಕ್ಷ್ಮಿಯನ್ನು ಮದುವೆಯಾಗಿ ಮನೆಗೆ ಕರೆದುಕೊಂಡು ಬಂದರು. ಶತ್ರು ಪಕ್ಷದವರು ಏನೇ ಹೇಳಲಿ, ಪ್ರಜಾಪತಿ* ಯು ಅವರ ಮೇಲೆ ಅತ್ಯಂತ ಪ್ರಸನ್ನನಾಗಿದ್ದ ಎಂಬುದನ್ನು ಒಪ್ಪಲೇಬೇಕು. ಶತ್ರು ಪಕ್ಷದವರು ಎಂದರು "ವರನ ವಯಸ್ಸನ್ನೂ ಕನ್ಯೆಯ ವಯಸ್ಸನ್ನೂ ಹೋಲಿಸಿ ನೋಡಿದರೆ ಅಷ್ಟು ವ್ಯತ್ಯಾಸ ಕಾಣಿಸುವುದಿಲ್ಲ. ಆದರೂ ಒಂದೆರಡು ಮಕ್ಕಳನ್ನೂ ಹಡೆದುಕೊಂಡು ಬಂದಿದ್ದರೆ ಚೆನ್ನಾಗಿರುತ್ತಿತ್ತು!" ಅವರು ಏನೇ ಎನ್ನಲಿ, ಆಕೆಯು ಬಹು ಸುಂದರಿ. ಆಕೆಯ ಲಾವಣ್ಯವನ್ನು ಕುರಿತು ಯಾರೂ ಆಕ್ಷೇಪವನ್ನೆತ್ತಲಿಲ್ಲ. ಸಾಮಾನ್ಯವಾಗಿ ಮದುವೆಯಾಗಲಿರುವ ಹುಡುಗೆಯರಕಿಂತ ರಾಜಲಕ್ಷ್ಮಿಯ ವಯಸ್ಸು ಸ್ವಲ್ಪ

* 'ಪ್ರಜಾಪತಿ' ಎಂದರೆ ವಿವಾಹ ದೇವತೆ—ಬ್ರಹ್ಮ.

ಹೆಚ್ಚಿರಬಹುದು. ತಾತ್ಪರ್ಯವಿಷ್ಟೆ: ಆಕೆಯ ವಯಸ್ಸು ಹತ್ತೊಂಬತ್ತಕ್ಕಿಂತ ಕಡಿಮೆಯಿರಲಾರದು. ಆಕೆಯ ತಂದೆ ಆಧುನಿಕ ವಿಚಾರದವರು. ಅವರು ಬಹಳ ಜತನದಿಂದ ಆಕೆಗೆ ಮ್ಯಾಟ್ರಿಕ್ ವರೆಗೆ ಶಿಕ್ಷಣವನ್ನು ಕೊಡಿಸಿದ್ದಾರೆ. ಅವರ ವಿಚಾರಗಳೇ ಬೇರೆಯಾಗಿದ್ದವು. ಆದರೆ ದುರ್ದೈವದಿಂದ ಅವರಿಗೆ ವ್ಯಾಪಾರದಲ್ಲಿ ಬಹಳ ಹಾನಿಯಾಗಿ ಬಡತನವು ಬಂದುದರಿಂದ ಇಂತಹ ಸುಪಾತ್ರನಿಗೆ ಮಗಳನ್ನು ಕೊಡಬೇಕಾಗುವ ಪ್ರಸಂಗವು ಬಂದಿತು

ಲಕ್ಷ್ಮಿ ಪಟ್ಟಣದ ಹುಡುಗಿ, ಗಂಡನ ಮನವನ್ನು ಒಂದೆರಡು ದಿವಸಗಳಲ್ಲಿಯೆ ಅರಿತುಕೊಂಡಳು. ಆದರೆ ಆತ್ಮೀಯರಿಂದ ತುಂಬಿದ ಈ ದೊಡ್ಡ ಮನೆಯಲ್ಲಿ ಮನಬಿಚ್ಚಿ ಇರಲು ಬಾರದಾಯಿತು. ಯಾರ ಒಡನೆಯೂ ಕೂಡಿಕೊಂಡು ಹೋಗಲು ಮನಸ್ಸಾಗಲಿಲ್ಲ. ಅತ್ತ ಶಿವ ಚರಣರು ಆಕೆಗೆ ತೋರಿಸುತ್ತಿದ್ದ ಪ್ರೇಮಕ್ಕೆ ಪಾರವೇ ಇರಲಿಲ್ಲ. ಮುದುಕ ಗಂಡನಿಗೆ ಹರೆಯದ ಹೆಂಡತಿ ಸಿಕ್ಕಿದ್ದರಿಂದಲ್ಲ, ಅವರಿಗೆ ಒಂದು ಅಮೂಲ್ಯ ನಿಧಿಯು ಸಿಕ್ಕಂತೆ ಆಗಿದ್ದುದರಿಂದ ಅವರು ಅಷ್ಟು ಪ್ರೀತಿಸುತ್ತಿದ್ದರು. ಮನೆಯ ಜನರು, ಆಳುಮಕ್ಕಳು, ಹೆಂಗಸರು ಆಕೆಯನ್ನು ಹೇಗೆ ಸತ್ಕರಿಸಬೇಕು, ಮರ್ಯಾದೆ ಮಾಡಬೇಕು ಎಂಬುದನ್ನು ನಿರ್ಧರಿಸದಾದರು. ಆಕೆಯ ಕಿವಿಗೆ ಆಗಾಗ್ಗೆ ಒಂದು ಸೊಲ್ಲು ಕೇಳಿಬರುತ್ತಿದ್ದಿತು:— ನಡುವಿನ ಸೊಸೆಯ ಮುಖಕ್ಕೆ ಮಸಿಯನ್ನು ಬಳಿದಂತಾಯಿತು. ಈಗ ಆಕೆಗೆ ಇದ್ದ ರೂಪ, ವಿದ್ಯಾಬುದ್ಧಿ, ಗುಣಗಳ ಅಹಂಕಾರವು ದೂರಾಯಿತು.

ಇಷ್ಟು ಮಾಡಿದರೂ ಅದರಿಂದ ಯಾವ ಲಾಭವೂ ಆಗಲಿಲ್ಲ. ಎರಡೇ ತಿಂಗಳಲ್ಲಿ ಆಕೆಯು ಬೇನೆ ಬಿದ್ದಳು. ಆ ಸಮಯದಲ್ಲಿ ನಡುವಿನ ಸೊಸೆಯ ಕೂಡ ಆಕೆಯ ಭೇಟಿಯಾಯಿತು. ನಡುವಿನ ಸೊಸೆಯೆಂದರೆ ವಿಪಿನನ ಹೆಂಡತಿ. ದೊಡ್ಡ ಮನೆಯ ಹೊಸ ಸೊಸೆಗೆ ಜ್ವರ ಬಂದುದನ್ನು ಕೇಳಿ, ಆಕೆಯನ್ನು ನೋಡಲು ವಿಪಿನನ ಹೆಂಡತಿಯು ಬಂದಿದ್ದಳು. ವಯಸ್ಸಿನಿಂದ ಆಕೆಯು ರಾಜಲಕ್ಷ್ಮಿಗಿಂತ ಒಂದೆರಡು ವರ್ಷ ದೊಡ್ಡವಳು

ಇರಬಹುದು. ಆಕೆಯೂ ಸುಂದರಿ ಎಂಬುದನ್ನು ಮನದಲ್ಲೇ ಲಕ್ಷ್ಮಿಯು ಒಪ್ಪಿದಳು. ಆದರೆ ಈಗ ಬಡತನದ ಲಕ್ಷಣಗಳು ಆಕೆಯ ಶರೀರದ ಮೇಲೆ ಮೂಡಿದ್ದುವು; ಅವೂ ಒಡೆದು ಕಾಣುತ್ತಿದ್ದುವು. ಜೊತೆಯಲ್ಲಿ ಆರೇಳು ವರ್ಷದ ಬಾಲಕನಿದ್ದ, ಅವನೂ ಬಡಕಾಗಿದ್ದ! ಲಕ್ಷ್ಮಿಯು ಆಕೆಗೆ ತನ್ನ ಹಾಸುಗೆಯ ಮೇಲೆ ಕುಳ್ಳಿರಲು ತಾಣವನ್ನಿತ್ತು ಸ್ವಲ್ಪ ಹೊತ್ತು ಆಕೆಯ ಮುಖವನ್ನೇ ನೋಡುತ್ತಿದ್ದಳು. ಕೈಯಲ್ಲಿ ಎರಡೆರಡು ಚಿನ್ನದ ಬಳೆಗಳ ವಿನಾ ದೇಹದ ಮೇಲೆ ಯಾವ ಆಭರಣವೂ ಇರಲಿಲ್ಲ. ಆಕೆಯು ಉಟ್ಟ ಸೀರೆಯೂ ಬಹಳ ಸಾದಾ ಇದ್ದಿತು. ಗಂಡನ ಅಗಲ–ಅಂಚಿನ ಮೋತರವನ್ನು ಉಟ್ಟುಕೊಂಡು ಬಂದಿದ್ದಳೊ ಏನೊ ಎಂಬಂತೆ ಎನಿಸುತ್ತಿದ್ದಿತು. ಹಳ್ಳಿಯ ಪದ್ಧತಿಯಂತೆ ಬಾಲಕ ದಿಗಂಬರನಿರಲಿಲ್ಲ. ಅವನೂ ಒಂದು ಚಿಕ್ಕ ಪಂಚೆಯನ್ನುಟ್ಟಿದ್ದ. ವಿಪಿನನ ಹೆಂಡತಿ ನಿರಾಭರಣ ಸುಂದರಿ, ಆಕೆಯ ಜೊತೆಗಿದ್ದ ಬಾಲಕ ಸತ್ಯಸುಂದರ.

ರಾಜಲಕ್ಷ್ಮಿಯು ಮೆಲ್ಲಗೆ ನಡುವಿನ ಸೊಸೆಯ ಕೈಯನ್ನು ತನ್ನ ಕೈಗೆ ತೆಗೆದುಕೊಂಡು "ನನಗೆ ಜ್ವರ ಬಂದುದು ನನ್ನ ಭಾಗ್ಯ, ಆದುದರಿಂದಲೇ ತಮ್ಮ ಭೇಟಿಯಾಗಲು ಅವಕಾಶ ದೊರೆಯಿತು. ನೆಂಟಸ್ತಿಕೆಯಲ್ಲಿ ನಾನು ಹಿರಿಯ ಓರಗಿತ್ತಿ ನಡುವಿನ ಸೊಸೆ! ನಡುವಿನ ಮೈದುನರು ಇವರಿಗಿಂತ ಬಹಳ ಚಿಕ್ಕವರು ಎಂದು ಕೇಳಿರುವೆ" ಎಂದಳು.

ನಡುವಿನ ಸೊಸೆಯು ನಗುಮೊಗದಿಂದ "ನೆಂಟಸ್ತಿಕೆಯಲ್ಲಿ ನಾನು ಚಿಕ್ಕವಳಾಗಿದ್ದರೂ ನನ್ನನ್ನು 'ತಾವು' ಎಂದು ಸಂಬೋಧಿಸಬೇಕೆ?" ಎಂದಳು.

"ಸರಿ, ಮೊದಲ ದಿನ ಎಂದೆ 'ತಾವು' ಎಂತ. ನಾನೆಂದೂ 'ತಾವು' ಎನ್ನುವವಳಲ್ಲ. ಆದರೆ ನೀನು ನನಗೆ 'ಹಿರಿಯ ಓರಗಿತ್ತಿ' ಯೆಂದು ಎನ್ನಬಾರದು. ನನಗೆ ಇದೆಲ್ಲ ಸರಿಬರುವುದಿಲ್ಲ. ನನ್ನ ಹೆಸರು ಲಕ್ಷ್ಮಿ."

"ಹೆಸರು ಹೇಳುವುದು ಅಗತ್ಯವಿಲ್ಲ ಜೀಜೀ (ಹಿರಿಯ ಓರಗಿತ್ತಿ), ತಮ್ಮನ್ನು ನೋಡುತ್ತಲೇ ಗೊತ್ತಾಗುವುದು. ಆದರೆ, ಅದಾರೊ ಏನೊ

ತಮಾಷೆಯಿಂದ ನನ್ನ ಹೆಸರನ್ನಿಟ್ಟುಬಿಟ್ಟರು ಕಮಲಾ ಎಂದು."
ಎಂದುನಡುವಿನ ಸೊಸೆಯು ಕೂತೂಹಲದಿಂದ ನನುನಕ್ಕಳು.

'ನಿನ್ನನ್ನು ನೋಡುತ್ತಲೇ ನಿನ್ನ ಹೆಸರೂ ಗೊತ್ತಾಗುವುದು' ಎಂದು ಉತ್ತರವಾಗಿ ರಾಜಲಕ್ಷ್ಮಿಯು ಹೇಳಬಯಸಿದರೂ ಅದು 'ನಕಲು' ಆಗುವುದೆಂದು ಬಗೆದು ಸುಮ್ಮಗಾದಳು. ಬಳಿಕ ಸ್ವಲ್ಪ ಸಮಯದ ನಂತರ ಲಕ್ಷ್ಮಿಯು "ನಮ್ಮಿಬ್ಬರ ಹೆಸರಿನ ಅರ್ಥವು ಒಂದೇ. ಆದರೆ ನಡುವಿನ ಸೊಸೆ, ನಾನು ನಿಮಗೆ 'ನೀನು' ಎಂದೆ, ನೀವೂ ನನಗೆ 'ನೀನು' ಎಂದು ಹೇಳದಾದಿರಲ್ಲ." ಎಂದಳು.

ನಡುವಿನ ಸೊಸೆಯು ನಗುತ್ತಾ "ಬಾಯಿಂದ ಒಮ್ಮೆಗೆ ಬರುವು ದಿಲ್ಲ ಜೀಜೀ, ವಯಸ್ಸಿನ ದೃಷ್ಟಿಯೊಂದನ್ನುಳಿದು ಎಲ್ಲ ದೃಷ್ಟಿಯಿಂದ ತಾವು ನನಗಿಂತ ದೊಡ್ಡವರು. ಇನ್ನೆರಡು ದಿವಸ ಹೋಗಲಿ, ಅಗತ್ಯ ವುಂಟಾದರೆ ಬದಲಾಯಿಸಲು ವೇಳೆ ತಗಲದು." ಎಂದಳು.

ರಾಜಲಕ್ಷ್ಮಿಗೆ ಉತ್ತರವೀಯುವುದಕ್ಕೆ ಆಗಲಿಲ್ಲ. ಈ ಹೆಂಗುಸು ಒಂದೇ ದಿನದ ಪರಿಚಯದಿಂದ ಸ್ನೇಹವನ್ನು ಘನಿಷ್ಠ ಮಾಡಲು ಬಯಸುವದಿಲ್ಲ ಎಂಬುದನ್ನು ಆಕೆಯು ಅರಿತಳು. ಆಕೆಯು ಹೇಳುವು ದಕ್ಕಿಂತ ಮೊದಲೇ ನಡುವಿನ ಸೊಸೆಯು ಹೊರಡಲನುವಾಗಿ "ಇನ್ನು ನಾನು ಹೊರಡುವೆ ಜೀಜೀ, ನಾಳೆ ಪುನಃ— " ಎಂದಳು.

ರಾಜಲಕ್ಷ್ಮಿಯು ಆಶ್ಚರ್ಯದಿಂದ "ಈಗಲೇ ಅಷ್ಟೇನು ಅವಸರ? ಸ್ವಲ್ಪ ಕುಳಿತುಕೊ" ಎಂದಳು.

"ತಾವು ಅಪ್ಪಣೆಯಿತ್ತರೆ ಕುಳಿತುಕೊಳ್ಳಲೇಬೇಕಾಗುವುದು. ಆದರೆ ಇವೊತ್ತು ಹೋಗಗೊಡಿರಿ. ಅವರು ಮನೆಗೆ ಬರುವ ಹೊತ್ತಾಗಿದೆ" ಇಷ್ಟೆಂದು ಕಮಲೆಯು ಎದ್ದು ನಿಂತು ಹುಡುಗನ ಕೈ ಹಿಡಿದುಕೊಂಡು ನಗುತ್ತಾ "ಹೋಗಿಬರುವೆ ಜೀಜೀ. ನಾಳೆ ಸ್ವಲ್ಪ ಬೇಗ ಬರುವೆ." ಎಂದಳು.

ವಿಪಿನನ ಹೆಂಡತಿಯು ಹೋದತ್ತ ರಾಜಲಕ್ಷ್ಮಿಯು ನೋಡುತ್ತ ಮಲಗಿದ್ದಳು. ಈಗ ಜ್ವರ ಇರಲಿಲ್ಲ. ಆದರೆ ಮನದಲ್ಲಿ ಗ್ಲಾನಿಯಿದ್ದಿತು.

ಆದಾಗ್ಯೂ ಸ್ವಲ್ಪ ಹೊತ್ತು ಅದನ್ನೆಲ್ಲ ಮರೆತಳು. ಇದುವರೆಗೆ ಆಕೆಯ ಮನೆಗೆ ಲೆಕ್ಕವಿಲ್ಲದಷ್ಟು ಹೆಂಗಸರು ಬಂದು ಹೋಗಿರುವರು. ಆದರೆ ಅವರನ್ನು ಈ ಕಮಲೆಯೊಡನೆ ಹೋಲಿಸಲಾಗುವುದೇ ಇಲ್ಲ. ಅವರು ತಮ್ಮಷ್ಟಕ್ಕೆ ತಾವೇ ಬಂದರು, ಬೇಗ ಹೊರಡಲು ಏಳುತ್ತಲೇ ಇರಲಿಲ್ಲ. ಅವರಿಗೆ ಕುಳಿತುಕೊಳ್ಳಲು ಹೇಳಿದರಾಯಿತು, ಕೇಳುವುದೇನು ? ಅವರಲ್ಲಿ ಅದೆಷ್ಟು ವಾಚಾಳತನ, ಅದೆಷ್ಟು ಅಹಂಕಾರ, ಅದೆಷ್ಟು ಮನೋರಂಜನೆಗಾಗಿ ಮಾಡುವ ಲಜ್ಜಾಸ್ಪದ ಪ್ರಯತ್ನ ಇತ್ತು ! ಭಾರದಿಂದ ಕುಸಿದ ಆಕೆಯ ಮನಸ್ಸು ಆ ಹೆಂಗಸರ ವಿರುದ್ಧ ಬಂಡ ನ್ನೆಬ್ಬಿಸಲು ಬಯಸುತ್ತಿತ್ತು. ಆದರೆ ಅಕಸ್ಮಾತ್ ಬಂದು ಕ್ಷಣಮಾತ್ರದಲ್ಲಿ ರೋಗಶಯ್ಯೆಯ ಬಳಿ ತನ್ನ ಪರಿಚಯವನ್ನು ಮಾಡಿಕೊಟ್ಟು ಹೋದ ಹೆಂಗುಸು ಯಾರು ? ಆಕೆಯ ತವರುಮನೆಯ ಮಾತನ್ನು ವಿಚಾರಿಸಲು ಮರೆತು ಹೋಯಿತು. ಆಕೆಯು ತನ್ನಂತೆ ಕಲಕತ್ತೆಯಲ್ಲಿ ಓದು-ಬರೆಹ ಕಲಿತವಳಲ್ಲ ಎಂಬುದನ್ನು ಲಕ್ಷ್ಮಿಯು ಹೇಗೆ ತಿಳಿದುಕೊಂಡಳೊ. ಹಳ್ಳಿಯವಳಾದರೂ ವಿಪಿನನ ಹೆಂಡತಿ ಓದುಬರೆಹ ಬಲ್ಲವಳು, ಇದ ಕ್ಕೋಸ್ಕರವಾಗಿಯೆ ಆಕೆಯ ಪ್ರಸಿದ್ಧಿ. ರಾಗರಾಗಿನಿಯಲ್ಲಿ ಕಮಲೆಯು ರಾಮಾಯಣವನ್ನು ಹೇಳುತ್ತಿರಬಹುದು, ಇದಕ್ಕಿಂತ ಹೆಚ್ಚಿಗೆ ಓದು ಆಕೆಗೆ ಬರಲಿಕ್ಕಿಲ್ಲ ಎಂದು ಲಕ್ಷ್ಮಿಯು ಯೋಚಿಸಿದಳು. ವಿಪಿನಸಂಥ ಬಡವನಿಗೆ ಕೊಟ್ಟ ಆಕೆಯ ತಂದೆಯು ಆಕೆಗೆ ಮನೆಯಲ್ಲಿ ಮಾಸ್ತರ ರನ್ನಿಟ್ಟು ಓದು-ಬರೆಹ ಕಲಿಸಿರಲಿಕ್ಕಿಲ್ಲ, ಸಾಲೆಗೆ ಕಳುಹಿ ಓದಿಸಿ, ಪಾಸು ಮಾಡಿಸಿ ಕನ್ಯಾದಾನವನ್ನು ಮಾಡಿಕೊಟ್ಟಿರಲಿಕ್ಕಿಲ್ಲ. ಉಜ್ವಲ ಶ್ಯಾಮವರ್ಣ, ಬೆಳ್ಳಗೆ ಎಂದು ಹೇಳಲುಬಾರದು. ಆದರೆ ರೂಪದ ಮಾತನ್ನು ಬಿಡಿರಿ— ಶಿಕ್ಷಣ, ಸಂಸರ್ಗ, ಸಂಸ್ಕಾರ ಮುಂತಾದುದರಲ್ಲಿ ವಿಪನನ ಹೆಂಡತಿ ಕಮಲೆಯು ತನ್ನ ಎದುರಿಗೆ ಸರಿಸಮಾನಳಾಗಿ ನಿಲ್ಲಳು ಎಂದು ಲಕ್ಷ್ಮಿಯು ಯೋಚಿಸಿದಳು. ಆದರೆ ಒಂದು ವಿಷಯದಲ್ಲಿ ತಾನು ಕಮಲೆಗಿಂತ ಕಿರಿಯಳು ಎಂದು ಲಕ್ಷ್ಮಿಯು ಭಾವಿಸಿದಳು. ಅದಾವುದೆಂದರೆ ಕಂಠಸ್ವರ ! ಮಾತು ಇಂಪಾದ ಗಾನ ! ಮಾತಿನ

ರೀತಿ ಮಧುರ ತಾನ! ಜಡತೆ ಎನಿತೂ ಇಲ್ಲ, ಮಾತಿನ ಪ್ರವಾಹ ನಿರರ್ಗಳ. ಆದರೆ ಲಕ್ಷ್ಮಿಯನ್ನು ಬಂಧಿಸಿದುದು ಆಕೆಯ ಅಂತರ. ಬಡವರ ಮನೆಯ ಸೊಸೆ. ಈ ಮಾತನ್ನು ಬಾಯಿಂದ ಹೇಳಲಿಲ್ಲ, ಆದರೆ ಒಂದು ಬಗೆಯ ಚಾತುರ್ಯದಿಂದ ತೋರಿಸಿದಳು. ಅದೇ ಬಡತನವನ್ನು ವ್ಯಕ್ತಮಾಡುವ ಸ್ವಾಭಾವಿಕ ರೀತಿಯಾಗಿತ್ತು. ಆಕೆಯು ಬಡವೆ, ಆದರೆ ಕಂಗಾಲಳಲ್ಲ. ಓರ್ವ ಸತ್ಕುಲದ ಹೆಂಗುಸು ಇನ್ನೊಬ್ಬ ಸತ್ಕುಲದ ರೋಗಪೀಡಿತ ಹೆಣ್ಣುಮಗಳನ್ನು ನೋಡ ಬಂದಿದ್ದಳು. ಇದರ ವಿನಾ ಮತ್ತಾವ ಉದ್ದೇಶವೂ ಆಕೆಯ ಬರು ವಿಕೆಯಲ್ಲಿರಲಿಲ್ಲ. ಸಾಯಂಕಾಲ ಪತಿಯು ನೋಡಲು ಬಂದಾಗ ಲಕ್ಷ್ಮಿಯು ಹೇಳಿದಳು "ಈ ದಿನ ಆ ಮನೆಯ ನಡುವಿನ ಸೊಸೆ ಯೊಡನೆ ಭೇಟಿಯಾಯಿತು."

"ಯಾರೊಡನೆ? ವಿಪಿನನ ಹೆಂಡತಿಯೊಡನೆ?"

"ಹೌದು, ನನ್ನ ಸೌಭಾಗ್ಯ. ಇಷ್ಟು ದಿನಗಳಾದ ಬಳಿಕ ನನ್ನನ್ನು ಕಾಣಲು ತಾನಾಗಿಯೆ ಬಂದಿದ್ದಳು. ಆದರೆ ಐದು ನಿಮಿಷಗಳಿಗಿಂತ ಹೆಚ್ಚು ಹೊತ್ತು ನಿಲ್ಲಲಿಲ್ಲ. ಕೆಲಸವಿತ್ತೆಂದು ಹೇಳಿ ಹೊರಟುಹೋದಳು."

"ಕೆಲಸ? ಅವರ ಮನೆಯಲ್ಲಿ ದಾಸದಾಸಿಯರು ಇದ್ದಾರೆಯೇ? ಮುಸುರೆ ತಿಕ್ಕುವಿಕೆಯಿಂದ ಮೊದಲುಗೊಂಡು ಅಡುಗೆಯನ್ನು ಕೂಡ ಸ್ವತಃ ಮಾಡಬೇಕಾಗುವದು. ನಿನ್ನ ಹಾಗೆ ಕುಳಿತುಕೊಂಡು ವಿಶ್ರಾಂತಿ ಪಡೆಯುವ ಭಾಗ್ಯ ಯಾರಿಗಿದೆ ಈ ಊರಲ್ಲಿ! ಒಂದು ಥಾಲಿ ನೀರನ್ನು ಕೂಡ ತಂದು ನೀನು ಕುಡಿಯಬೇಕಾಗಿಲ್ಲ."

ಈ ನುಡಿಗಳು ರಾಜಲಕ್ಷ್ಮಿಗೆ ರುಚಿಸಲಿಲ್ಲ. ತನ್ನನ್ನು ಅವಮಾನ ಮಾಡುವುದಕ್ಕಾಗಿ ಆಡಿದ ಮಾತುಗಳಲ್ಲ, ದೊಡ್ಡಿಸ್ತನದ ಮಾತುಗಳು ಅವು ಎಂದು ಆಕೆಯು ತಿಳಿದುಕೊಂಡಳು. ಆದುದರಿಂದ ಕೋಪಿಸಿ ಕೊಳ್ಳಲಿಲ್ಲ. ಆಕೆಯೆಂದಳು "ನಡುವಿನ ಸೊಸೆಗೆ ಬಹಳ ಅಹಂಕಾರ ವಂತೆ. ತನ್ನ ಮನೆ ಬಿಟ್ಟು ಎಲ್ಲಿಗೂ ಹೋಗುವುದಿಲ್ಲವಂತೆ!"

“ಹೋಗುವಳು ಹೇಗೆ? ಕೈಗಳಲ್ಲಿ ಎರಡೆರಡು ಬಳೆಗಳ ಹೊರತು ಏನಿದೆ ಹತ್ತಿರ? ನಾಚಿಕೆಯಿಂದ ಮುಖ ತೋರಿಸಲಾರಳು.”

ಲಕ್ಷ್ಮಿಯು ಸ್ವಲ್ಪ ನಕ್ಕು “ಇವರಲ್ಲಿ ನಾಚಿಕೆಯೇನು? ಜಗತ್ತು ಆಕೆಯ ಶರೀರದ ಮೇಲೆ ಆಭರಣಗಳನ್ನು ನೋಡಲು ವ್ಯಾಕುಲವಾಗಿ ರುವುದೇನು? ನೋಡದಿದ್ದರೆ ಆಕೆಯನ್ನು ಕಂಡಾಗ ಛಿ, ಥೂ ಮಾಡುವು ದೇನು?” ಎಂದಳು.

“ಆಭರಣ? ನಿನಗೆ ನಾನು ಕೊಟ್ಟಂಥ ಆಭರಣಗಳನ್ನು ಈ ಊರಲ್ಲಿ ಯಾವನೂ ತನ್ನ ಕಣ್ಣಿಂದ ನೋಡಿರಲಿಕ್ಕಿಲ್ಲ ತನ್ನ ಹೆಂಡತಿಗೆ ಎರಡು ಬಳೆಗಳ ಹೊರತು ಏನನ್ನೂ ಮಾಡಿಸಿ ಕೊಡದಾದ! ಹುಃ ಹುಃ ರೂಪಾಯಿಗಳ ಜೋರು ಗೊತ್ತಿಲ್ಲ! ಮೆಟ್ಟಿನಿಂದ ಹೊಡಿಸುವೆ!”

ಲಕ್ಷ್ಮಿಯು ನಾಚಿಕೆಯಿಂದ “ಛಿ! ಛಿ!, ಇಂತಹ ಮಾತುಗಳ ನ್ನೇಕ ಆಡುವಿರಿ?” ಎಂದಳು.

“ಇಲ್ಲ, ನನ್ನ ಬಳಿ ಕಪಟ, ಮೋಸಗಾರಿಕಯ ಮಾತಿಲ್ಲ. ಒಳ ಗೊಂದು ಹೊರಗೊಂದು ಇಲ್ಲ. ಹೇಳಬೇಕಾದುದನ್ನು ಸ್ಪಷ್ಟವಾಗಿ ಹೇಳುವೆ.”

ಲಕ್ಷ್ಮಿಯು ಸುಮ್ಮಗೆ ಕಣ್ಣು ಮುಚ್ಚಿಕೊಂಡು ಮಲಗಿದ್ದಳು. ಹೇಳುವುದಾದರೂ ಏನು? ನಿರ್ಬಲರ ವಿರುದ್ಧವಾಗಿ ಆಡುವ ಕಠೋರ ನುಡಿಗಳಿಗೇ ಇವರು ಸ್ಪಷ್ಟವಾದಿತನವೆಂದು ತಿಳಿಯುವರು. ಶಿವಚರಣ ಸುಮ್ಮಗಾಗಲಿಲ್ಲ. ಪುನಃ ಅವನು ಎನ್ನತೊಡಗಿದ “ಮದುವೆಗಾಗಿ ಅವನು ತೆಗೆದುಕೊಂಡ ಐದುನೂರು ರೂಪಾಯಿಯ ಕೈಗಡ ಈಗ ಬಡ್ಡಿ ಸೇರಿ ಏಳು ನೂರು ರೂಪಾಯಿ ಆದುವು. ಇದರ ಚಿಂತಯಿದೆಯೇನು ಅವನಿಗೆ? ಬಡವ— ಒಂದು ಬದಿಗೆ ಬಿದ್ದಿದ್ದಾನೆ, ಬಿದ್ದಿರಲಿ. ನಾನು ಬಯಸಿದರೆ ಕಿವಿಗೆ ಹರಳು ಹಚ್ಚಿ ಹೊರಗೆ ಹಾಕಿಸಬಲ್ಲೆ. ದಾಸಿಯ ಕೆಲಸಕ್ಕೂ ಬಾರದಾಕೆ ನನ್ನ ಹೆಂಡತಿಯ ಎದುರಿಗೆ ಅಹಂಕಾರ ತೋರಿಸುವಳೆ!”

ರಾಜಲಕ್ಷ್ಮಿಯು ಮಗ್ಗುಲಾಗಿ ಮಲಗಿಕೊಂಡಳು. ರೋಗಿ, ಮೇಲಾಗಿ ವಿರಕ್ತಿ. ಇವರಿಂದಾಗಿ ಆಕೆಯ ಇಡಿ ದೇಹದಲ್ಲಿ ನಡುಗು ಹುಟ್ಟತೊಡಗಿತು. ಮರುದಿನ ಮಧ್ಯಾಹ್ನ ಮೃದುಸ್ವರವನ್ನು ಕೇಳಿ ರಾಜಲಕ್ಷ್ಮಿಯು ಕಣ್ದೆರೆದು ನೋಡಿದಳು— ವಿಪಿನನ ಹೆಂಡತಿ ಮಾತನಾಡದೆ ಹೋಗುತ್ತಿದ್ದಳು. ಆಕೆಯನ್ನು ಕರೆದು ''ಕಮಲಾ, ಹೋಗುತ್ತಿರುವಿಯಾ?'' ಎಂದಳು.

ಕಮಲೆಯು ನಾಚಿಕೆಯಿಂದ ಹಿಂತಿರುಗಿ "ತಾವು ನಿದ್ರಿಸುತ್ತಿರುವಿರೆಂದು ತಿಳಿದೆ. ಈ ದಿನ ಹೇಗಿದೆ ಜೀಜೀ?" ಎಂದಳು.

"ಈ ದಿನ ಬಹಳ ಚೆನ್ನಾಗಿರುವೆ. ನೀನು ನಿನ್ನ ಮಗನನ್ನು ಕರೆದುಕೊಂಡು ಏಕೆ ಬರಲಿಲ್ಲ?"

''ಈ ದಿನ ಅವನು ಅಕಸ್ಮಾತ್ ಮಲಗಿಬಿಟ್ಟ ಜೀಜೀ.''

"ಅಕಸ್ಮಾತ್ ಮಲಗಿದ, ಎಂದರೆ?"

"ನಡತೆ ಕಡುವುದೆಂದು ಮಧ್ಯಾಹ್ನ ಅವನಿಗೆ ನಾನು ಮಲಗಲಿಕ್ಕೆ ಕೊಡುವುದಿಲ್ಲ ಜೀಜೀ.''

"ಬಿಸಿಲಿನಲ್ಲಿ ಗೊಂದಲ ಹಾಕುತ್ತ ತಿರುಗುವುದಿಲ್ಲೇನು?

''ಅದೇಕೆ ತಿರುಗುವುದಿಲ್ಲ? ಮಧ್ಯಾಹ್ನ ಮಲಗಿರುವುದಕ್ಕಿಂತ ಅದು ಮೇಲು.''

''ನೀನೂ ಮಲಗಲಿಕ್ಕಿಲ್ಲ ತಾನೆ?''

ಕಮಲೆಯು ತಲೆಯಲ್ಲಾಡಿಸುತ್ತ ನಗುತ "ಇಲ್ಲ." ಎಂದಳು.

ಹೆಂಗುಸರ ಸ್ವಭಾವಕ್ಕನುಸಾರವಾಗಿ ತನ್ನ ಕಾರ್ಯಕ್ರಮವನ್ನು ವರ್ಣಿಸುತ್ತ ಇನ್ನು ಕುಳಿತುಕೊಳ್ಳುವಳು ಎಂದು ರಾಜಲಕ್ಷ್ಮಿಯು ಬಗೆದಿದ್ದಳು. ಆದರೆ ಕಮಲೆಯು ಹಾಗೆ ಮಾಡಲಿಲ್ಲ. ಬಳಿಕ ಮತ್ತೆ ಅದಾವೊ ಮಾತುಕತೆಗಳು ನಡೆದುವು. ಮಾತುಮಾತಿನಲ್ಲಿ ರಾಜ-ಲಕ್ಷ್ಮಿಯು ತನ್ನ ತವರುಮನೆ, ಅಣ್ಣ-ತಮ್ಮಂದಿರು, ಅಕ್ಕ-ತಂಗೆಂದಿರು, ಮಾಸ್ಟರ್ ಸಾಹೇಬರು, ಸ್ಕೂಲು, ಮ್ಯಾಟ್ರಿಕ್ ಪಾಸು ಮಾಡಿದುದು

ಮುಂತಾದ ಎಲ್ಲ ಸಂಗತಿಗಳನ್ನು ಹೇಳಿಬಿಟ್ಟಳು. ಸ್ವಲ್ಪ ಎಚ್ಚರ ಬಂದಮೇಲೆ ಕಮಲೆಯು ಮಾತುಗಾರಿಕೆಯಲ್ಲಿ ಮುಂದಿಲ್ಲ, ಕೇಳಲಿಕ್ಕೆ ಮುಂದಿರಬಹುದು ಎಂಬುದನ್ನು ಅರಿತಳು. ತನ್ನ ಬಗ್ಗೆ ಆಕೆಯು ಯಾವ ಮಾತನ್ನೂ ಹೇಳಲಿಲ್ಲ. ಮೊದಲು ಲಕ್ಷ್ಮಿಗೆ ನಾಚಿಕೆಯೆನಿಸಿತು, ಮರುಕ್ಷಣದಲ್ಲಿಯೆ ಹರಟೆಯಾಡಲು ಆಕೆಯ ಬಳಿ ವಿಷಯವಾದರೂ ಏನು ಇದೆ! ಎಂದು ಯೋಚಿಸಿದಳು. ನಿನ್ನೆ ಕಮಲೆಯ ವಿಷಯವಾಗಿ ಉಂಟಾದ ಅಪ್ರಸನ್ನತೆಯು ಇಂದು ಲಕ್ಷ್ಮಿಯಲ್ಲಿರಲಿಲ್ಲ. ಆಕೆಗೆ ಸ್ವಲ್ಪ ತೃಪ್ತಿಯಾಯಿತು.

ಗೋಡೆಗೆ ತೂಗು ಹಾಕಿದ ಗಡಿಯಾರದಲ್ಲಿ ನಾನಾಬಗೆಯ ಮಧುರ ವಾದ್ಯ ಸಂಗೀತದೊಡನೆ ಮೂರು ಬಾರಿಸಿದುವು. ಕಮಲೆಯು ಎದ್ದು ನಿಂತಳು ಮತ್ತು ವಿನಯಪೂರ್ವಕವಾಗಿ "ಜೀಜೀ, ಇನ್ನು ಹೊರಡುವೆ." ಎಂದಳು.

ಲಕ್ಷ್ಮಿಯು ಕುತೂಹಲದಿಂದ "ಸೋದರಿ, ನಿನಗೆ ಮೂರು ಗಂಟೆಯವರೆಗೆ ಮಾತ್ರ ಬಿಡುವು ಇರುವುದೆ? ಯಜಮಾನರು ಗಡಿಯಾರ ವನ್ನು ನೋಡಿ ಸರಿಯಾಗಿ ಮನೆಗೆ ಬರುವರೇನು?" ಎಂದಳು.

"ಈ ದಿನ ಅವರು ಮನೆಯಲ್ಲೇ ಇದ್ದಾರೆ."

"ಹಾಗಾದರೆ ಅವಸರವೇಕೆ? ಇನ್ನಿಷ್ಟು ಹೊತ್ತು ಕುಳಿತುಕೊ."

ಕಮಲೆಯು ಕುಳಿತುಕೊಳ್ಳಲಿಲ್ಲ, ಆದರೆ ಹೊರಡಲು ಮುಂದಕ್ಕೆ ಅಡಿಯನ್ನು ಇಡದಾದಳು. ಮೆಲ್ಲಗೆ ನುಡಿದಳು "ಜೀಜೀ, ನೀವು ಶಿಕ್ಷಿತರು, ಓದು ಬರೆಹ ಬಂದವರು. ನಾನೇ, ಹಳ್ಳಿಯ ಹುಡುಗಿ—"

"ನಿನ್ನ ತವರುಮನೆ ಯಾವ ಊರಲ್ಲಿದೆ?"

"ಜೀಜೀ, ಅಪ್ಪಟ ಹಳ್ಳಿಯಲ್ಲಿ. ನಿನ್ನೆ ತಿಳಿಯದೆ ನಾನು ಏನೇನು ಮಾತನಾಡಿದೆನೊ—ಆದರೆ ನಿಮಗೆ ಅಪಮಾನ ಮಾಡಲಿಕ್ಕಾಗಿ ಯಾವು ದನ್ನೂ ಆಡಿಲ್ಲ, ನೀವು ಹೇಳಿದಂತಹ ಆಣೆಯನ್ನು ಮಾಡಲು ಕೂಡ ಸಿದ್ಧಳಿರುವೆ—"

ರಾಜಲಕ್ಷ್ಮಿ ದಿಙ್ಮೂಢಳಾದಳು. ಬಳಿಕ "ಹೀಗೇಕೆ ಹೇಳುವಿ ಕಮಲಾ? ನೀನು ಅಂತಹ ಯಾವ ಮಾತನ್ನೂ ಆಡಲಿಲ್ಲವಲ್ಲ?" ಎಂದಳು.

ಕಮಲೆಯು ಇದಕ್ಕೆ ಯಾವ ಉತ್ತರವನ್ನೂ ಕೊಡದೆ 'ಹೊರಟೆ' ಎಂದು ಮೆಲ್ಲಗೆ ಹೊರಟಳು. ಆದರೆ ಆಕೆಯ ದನಿಯು ಲಕ್ಷ್ಮಿಗೆ ದಿನದಂತೆ ಕೇಳಿಸಲಿಲ್ಲ.

ರಾತ್ರಿ ಶಿವಚರಣ ಕೋಣೆಗೆ ಬಂದಾಗ ರಾಜಲಕ್ಷ್ಮಿಯು ಸುಮ್ಮಗೆ ಮಲಗಿದ್ದಳು. ಶರೀರವು ದಿನಕ್ಕಿಂತ ಸ್ವಸ್ಥವಾಗಿತ್ತು ಮತ್ತು ಮನಸ್ಸೂ ಶಾಂತ ಹಾಗೂ ಪ್ರಸನ್ನವಿತ್ತು.

ಶಿವಚರಣನೆಂದ "ಹೇಗಿದೆ ಪ್ರಕೃತಿ ಲಕ್ಷ್ಮಿ?"

ಲಕ್ಷ್ಮಿಯು ಎದ್ದು ಕುಳಿತು "ಚನ್ನಾಗಿದೆ" ಎಂದಳು.

"ಬೆಳಗಿನ ಸಂಗತಿ ಗೊತ್ತಾಯಿತೇನು? ಅವನನ್ನು ಕರೆಯಿಸಿ ಎಲ್ಲರ ಎದುರಿಗೆ ಬೆದರಿಸಿದೆ, ಆಜನ್ಮ ನನ್ನ ಮಾತನ್ನು ನೆನಪಿಡುವ. ನಾನು ಬೇಲಪುರದ ಶಿವಚರಣ ಚೌಧರಿ! ಹಾಂ!"

ರಾಜಲಕ್ಷ್ಮಿಯು ಹೆದರಿ "ಯಾರಿಗೆ?" ಎಂದಳು.

"ವಿಪಿನನನ್ನು ಕರಯಿಸಿ ಹೇಳಿದೆ— ನಿನ್ನ ಹೆಂಡತಿ ನನ್ನ ಹೆಂಡತಿಯ ಬಳಿಗೆ ಬಂದು ತನ್ನ ಹೆಮ್ಮೆಯನ್ನು ತೋರಿಸಿ, ಹಿರಿಮೆಯನ್ನು ಪ್ರದರ್ಶಿಸಿ ಹೋಗುವಳು, ಅವಮಾನಮಾಡಿ ಹೋಗುವಳು. ಇಷ್ಟು ಇದೆಯೇನು ಅವಳಿಗೆ ಅಹಂಕಾರ! ದುಷ್ಟ, ಅಯೋಗ್ಯ, ಕೀಳು ಮನೆತನದ ಹುಡುಗಿ! ಆಕೆಯ ಕೂದಲನ್ನು ಕತ್ತರಿಸಿ ಕತ್ತೆಯ ಮೇಲೆ ಕುಳ್ಳಿರಿಸಿ ಊರ ಹೊರಗೆ ಹಾಕಿಸಬಲ್ಲೆ ತಿಳಿಯಿತೇನು!"

ರಾಜಲಕ್ಷ್ಮಿಯ ರೋಗಗ್ರಸ್ಥ ಮುಖವು ಬಿಳುಪೇರಿತು. ಆಕೆಯೆಂದಳು "ನೀವು ಇದೇನು ಹೇಳುತ್ತಿರುವಿರಿ?"

ಶಿವಚರಣ ತನ್ನ ಎದೆಯನ್ನು ಬಡಿದುಕೊಂಡು ಗರ್ವದಿಂದ ನುಡಿಯತೊಡಗಿದ "ಈಗ ಈ ಊರಲ್ಲಿ ನ್ಯಾಯಾಧೀಶ ಎಂದರೆ

ನಾನೇ, ಮ್ಯಾಜಿಸ್ಟ್ರೇಟ್ ಎಂದರೆ ನಾನೇ, ಫೌಜದಾರನೆಂದರೆ ನಾನೇ, ಪೋಲೀಸನೆಂದರೆ ನಾನೇ! ನಾನೇ! ಕೊಲ್ಲುವ ಕಟ್ಟಿಗೆ, ಬದುಕಿಸುವ ಕೋಲು ನನ್ನ ಕೈಯಲ್ಲಿವೆ. ಹೇಳು, ನಿನ್ನ ಪಾದಸೇವೆಯನ್ನು ವಿಪಿನನ ಹೆಂಡತಿಯಿಂದ ಮಾಡಿಸಲೇನು? ಹಾಗೆ ನಾನು ಮಾಡಿಸದೆ ಹೋದರೆ ಲಾಟೂ ಚೌಧರಿಯ ಮಗನೇ ನಾನಲ್ಲ. ನಾನು— "

ಈ ಬಗೆಯಾಗಿ ವಿಪಿನನ ಹೆಂಡತಿಯನ್ನು ಎಲ್ಲರ ಎದುರಿಗೆ ಅಪಮಾನಗೊಳಿಸಿದ ವರ್ಣನೆ ಮತ್ತು ವ್ಯಾಖ್ಯಾನದಲ್ಲಿ ಲಾಟೂ ಚೌಧರಿಯ ಮಗನು ಅಪಶಬ್ದ, ಕುಶಬ್ದಗಳನ್ನು ಉಪಯೋಗಿಸಲು ಹಿಂದುಮುಂದು ನೋಡಲೇ ಇಲ್ಲ. ಅವನ ಎದುರಿಗೆ ಎವೆಯಿಕ್ಕದೆ ನೋಡುತ್ತ ಕುಳಿತಿದ್ದ ರಾಜಲಕ್ಷ್ಮಿಯ ಮನಸ್ಸು ಎನ್ನತೊಡಗಿತು "ಭೂಮಿ ತಾಯೀ, ಸಿಡಿ! ಬಿರಿ!! "

೨

ಎರಡನೆಯ ಬಾರಿ ಮದುವೆ ಮಾಡಿಕೊಂಡ ಶಿವಚರಣನ ಹೆಂಡತಿ ತರುಣಿ. ಅವನು ಆಕೆಯ ಶರೀರದ ರಕ್ಷಣೆಗಾಗಿ ತನ್ನ ದೇಹದ ಹೊರತಾಗಿ ಸರ್ವಸ್ವವನ್ನು ಕೊಡಬಲ್ಲವನಾಗಿದ್ದ. ರಾಜಲಕ್ಷ್ಮಿಯ ಆ ದೇಹ ಜೇಲಪುರದಲ್ಲಿ ನೆಮ್ಮದಿಯಿಂದ ಇರಲಾರದಾಯಿತು. ಹವೆ ನೀರು ಬದಲಾಯಿಸಬೇಕೆಂದು ಡಾಕ್ಟರರು ಸಲಹೆಯನ್ನಿತ್ತರು. ಶಿವಚರಣ ತನ್ನ ಹದಿನೈದುವರೆ ಆಣೆಯ ಜಮೀನುದಾರಿಗೆ ತಕ್ಕಂತೆ ಹವಾ-ಬದಲಾಯಿಸಲು ಹೊರಡುವ ಸಿದ್ಧತೆಯನ್ನು ಮಾಡತೊಡಗಿದ. ಅವರು ಹೊರಡುವ ದಿನ ಕೇವಲ ವಿಪಿನನ ಮತ್ತು ಅವನ ಹೆಂಡತಿಯನ್ನುಳಿದು ಎಲ್ಲರೂ ಅವರ ಮನೆಗೆ ಬಂದು ಯಾತ್ರೆಯು ಸುಖರೂಪವಾಗಲೆಂದು ಹಾರೈಸಿದರು. ಆದರೆ ಹೊರಗೆ ಶಿವಚರಣ ಆಗ ಆಡಬಾರದ ಕೆಲವೊಂದು ಮಾತುಗಳನ್ನಾಡಿದ. ಒಳಗೆ ಹಿರಿಯ ಅತ್ತೆಯು ಉಗ್ರವಾದ ರೂಪ ತಾಳಿದಳು. ಹೊರಗೆ ಶಿವಚರಣನ ಮಾತುಗಳಿಗೆ 'ಸೋನಿಂಗಾ' ಎನ್ನುವವರ ಸಂಖ್ಯೆಯು ಕಡಮೆಯಿರಲಿಲ್ಲ, ಒಳಗೆ ಅತ್ತೆಯ ಅಳುವನ್ನು ಇಮ್ಮಡಿಸಲು ಹೇಳಲಾರದಷ್ಟು ಹೆಂಗಸರು ನೆರೆದರು. ಆದರೆ ಮಾತನ್ನು

ಆಡದೆ ಇದ್ದವಳೆಂದರೆ ರಾಜಲಕ್ಷ್ಮಿಯೋರ್ವಳೆ. ನಡುವಿನ ಸೊಸೆಯ ಪ್ರತಿಯಾಗಿ ಅವಳಲ್ಲಿ ಇರುವಷ್ಟು ಕ್ಷೋಭೆ ಮತ್ತು ಅಭಿಮಾನ ಯಾರಿಗೂ ಇರಲಿಲ್ಲ. ಆಕೆಯು ಮನದಲ್ಲಿಯೆ ಎಂದುಕೊಳ್ಳತೊಡಗಿದಳು "ನನ್ನ ಕಾಡು ಗಂಡ ಎಷ್ಟೇ ಅನ್ಯಾಯ ಮಾಡಿದರೂ ನಾನು ಏನನ್ನೂ ಅಂದಿಲ್ಲ ವಲ್ಲ?" ಈ ದಿನ ಮನೆಯಲ್ಲಿ ಮನೆಯ ಮತ್ತು ಹೊರಗಿನ ಹೆಂಗುಸರ ಚೀತ್ಕಾರಕ್ಕೆ ತಾನು ದನಿಗೂಡಿಸುವುದು ನಾಚಿಕೆಗೇಡಿತನವೆಂದು ಆಕೆಗೆ ಎನಿಸತೊಡಗಿತು. ಹೋಗುವಾಗ ಉತ್ಸುಕತೆಯಿಂದ ಲಕ್ಷ್ಮಿಯು ಪಲ್ಲಕ್ಕಿಯ ಪರದೆಯನ್ನು ಸರಿಸಿ ವಿಪಿನನ ಬೀಳಲಾದ ಮನೆಯ ಕಡೆಗೆ ನೋಡಿದಳು. ಕಿಡಿಕಿಯಲ್ಲಿ ಯಾರ ನೆರಳೂ ನಹ ಕಾಣಿಸಲಿಲ್ಲ.

ಕಾಶಿಯಲ್ಲಿ ಮನೆಯೊಂದನ್ನು ಗೊತ್ತು ಮಾಡಲಾಗಿದ್ದಿತು. ಅಲ್ಲಿಯ ಹವೆಯೂ ನೀರೂ ರಾಜಲಕ್ಷ್ಮಿಗೆ ಒಗ್ಗಿದವು; ಪ್ರಕೃತಿಯು ಸುಧಾರಿಸ ತೊಡಗಿತು. ನಾಲ್ಕು ತಿಂಗಳಾದ ಬಳಿಕ ತಿರುಗಿ ಮನೆಗೆ ಬಂದಳು. ಆಕೆಯ ಕಾಂತಿಯನ್ನು ಕಂಡು ಹೆಂಗುಸರು ಮನದೊಳಗೇ ಅಸೂಯೆ ಪಡತೊಡಗಿದರು.

ಹೇಮಂತ ಋತುವು ಬರತೊಡಗಿದ್ದಿತು. ಒಂದು ದಿನ ಮಧ್ಯಾಹ್ನ ತನ್ನ ಚಿರರುಗ್ಣ ಪತಿಯ ಸಲುವಾಗಿ ಉಣ್ಣೆಯ ಕೊರಳ ಪಟ್ಟಿಯನ್ನು ನಡುನ ಸೊಸೆಯು ಹೆಣೆಯುತ್ತಿದ್ದಳು ಮತ್ತು ಬಳಿಯಲ್ಲಿ ಮಗನು ಕುಳಿತು ಆಡುತ್ತಿದ್ದ. ಅವನೇ ನೋಡಿ ಕೂಗಿದ "ಅಮ್ಮಾ, ದೊಡ್ಡಮ್ಮಾ!"

ಕಮಲೆಯು ಕೈಯೊಳಗಿನ ಕೆಲಸವನ್ನು ಬಿಟ್ಟು ಚಟಕ್ಕನೆದ್ದು ನಮಸ್ಕರಿಸಿದಳು ಮತ್ತು ಕುಳಿತುಕೊಳ್ಳಲು ಆಸನವನ್ನು ಹಾಸಿದಳು. ಬಳಿಕ ಅರಳಿದ ಮೊಗದಿಂದ "ಪ್ರಕೃತಿಯು ಚೆನ್ನಾಯಿತೆ ಜೀಜೀ?" ಎಂದು ಕೇಳಿದಳು ಕಮಲೆ.

"ಹೌದು, ಚೆನ್ನಾಯಿತು. ಚೆನ್ನಾಗಿ ಆಗದೆ ಹೋಗಬಹುದೂ ಆಗಿತ್ತು, ನಾನು ಹಿಂತಿರುಗಿ ಬಾರದಿರಬಹುದೂ ಆಗಿತ್ತು, ಆದರೆ ನೀನು ಮಾತ್ರ ನಾನು ಹೋಗುವಾಗ ಬಂದು ವಿಚಾರಿಸಲಿಲ್ಲ ಕೂಡ. ಹೋಗು ವಾಗ ನಿನ್ನ ಮನೆಯ ಕಿಡಕಿಯ ಕಡೆಗೇ ನೋಡುತ್ತ ಹೋದೆ, ಸ್ವಲ್ಪ

ನೆರಳೂ ಕಾಣಿಸಲಿಲ್ಲ. ರೋಗಿ ಸಹೋದರಿಯು ಹೋಗುತ್ತಿರುವಳೆಂದು ನಿನಗೆ ದಯೆ–ಮೋಹ ಕೂಡ ಉಂಟಾಗಲಿಲ್ಲವೆ ಕಮಲಾ? ಇಷ್ಟು ಪಾಷಾಣ ಹೃದಯದವಳೇ ನೀನು?"

ಕಮಲೆಯ ಕಣ್ಣುಗಳು ನೀರು ತುಂಬಿಬಂದುವು, ಉತ್ತರವು ಹೊರಬರದಾಯಿತು.

"ನನ್ನಲ್ಲಿ ಯಾವ ದೋಷವಾದರೂ ಇರಲಿ, ಆದರೆ ಕಮಲಾ, ನಿನ್ನಂತೆ ಕಲ್ಲು ಎದೆಯಿಲ್ಲ. ಪರಮಾತ್ಮನು ಹಾಗೆ ಮಾಡದಿರಲಿ. ಆದರೆ ಇಂತಹ ಸ್ಥಿತಿಯಲ್ಲಿ ನಾನು ನಿನ್ನನ್ನು ನೋಡದೆ ಇರುತ್ತಿರಲಿಲ್ಲ."

ಈ ಆರೋಪಣೆಗೂ ನಡುವಿನ ಸೊಸೆಯು ಉತ್ತರವೀಯದೆ ಸುಮ್ಮಗೆ ನಿಂತಳು.

ರಾಜಲಕ್ಷ್ಮಿಯು ಈ ಮೊದಲು ಇಲ್ಲಿಗೆಂದೂ ಬಂದಿರಲಿಲ್ಲ. ಮೊಟ್ಟಮೊದಲು ಈ ಮನೆಯಲ್ಲಿ ಕಾಲಿಟ್ಟುದು ಇಂದೇ. ಆಕೆಯು ತಿರುತಿರುಗಿ ಪ್ರತಿಯೊಂದು ಕೋಣೆಯನ್ನು ನೋಡತೊಡಗಿದಳು. ನೂರು ವರ್ಷಗಳ ಹಿಂದ ಕಟ್ಟಿಸಿದ ಮುದುಕ ಮನೆ. ಅದರಲ್ಲಿ ಮೂರು ಕೋಣೆಗಳು ಮಾತ್ರ ವಾಸಿಸಲು ಸ್ವಲ್ಪ ಯೋಗ್ಯವಾಗಿವೆ ಬಡತನವು ಮನೆಮಾಡಿದೆ, ಸಾಮಾನುಗಳಂತೂ ಇಲ್ಲವೆಂದೇ ಹೇಳಬಹುದು. ಗೋಡೆಯ ಸುಣ್ಣವೂ ಕಳಚುತಲಿದೆ, ಪುನಃ ಹಚ್ಚಿಸುವ ಯೋಗ್ಯತೆ ಯಿಲ್ಲ. ಆದಾಗ್ಯೂ ಅನಾವಶ್ಯಕ ಹೊಲಸು ಎಲ್ಲಿಯೂ ಕಾಣಿಸು ವುದಿಲ್ಲ. ಚಿಕ್ಕಚಿಕ್ಕ ಹಾಸುಗೆಗಳಿವೆ ಅತ್ಯಂತ ಸ್ವಚ್ಛ ಮೂರು–ನಾಲ್ಕು ದೇವಿ–ದೇವತೆಗಳ ಚಿತ್ರಗಳು ಗೋಡೆಗೆ ತೂಗುಹಾಕಿವೆ. ಅಲ್ಲದೆ ನಡುವಿನ ಸೊಸೆಯ ಕೈಗಾರಿಕೆಯ ಕುಶಲತೆಯ ವಸ್ತುಗಳೂ ಒಂದೆರಡು ಇವೆ ಅವು ವಿಶೇಷತಃ ಉಣ್ಣೆಯ ಮತ್ತು ನೂಲಿನ ಕಲಾವಸ್ತುಗಳು. ಅವುಗಳಲ್ಲಿ ಹೊಸ ಕಲಾವಿದನ ಕೈವಾಡವಿಲ್ಲ. 'ಸ್ವಾಗತಮ್' 'ವೆಲ್‌ಕಮ್' ಎಂಬುವೂ ಅಪದ್ಧವಾಗಿ ಬರದ ಗೀತೆಯ ಶ್ಲೋಕಗಳೂ ಬೆಲೆಯುಳ್ಳ ಕನ್ನಡಿಯ ಕಟ್ಟುಗಳಲ್ಲಿ ಹಾಕಿದುವಿಲ್ಲ. ಲಕ್ಷ್ಮಿಯು

ಆಶ್ಚರ್ಯದಿಂದ “ಇದು ಯಾರ ಚಿತ್ರ ಕಮಲಾ? ನೋಡಿದ ಹಾಗೆ ತೋರುವುದು” ಎಂದಳು.

ಕಮಲೆಯು ನಸುನಾಚಿಕೆಯಿಂದ “ಲೋಕಮಾನ್ಯ ತಿಲಕರದು. ಫೋಟೋ ನೋಡಿ ಹೆಣೆಯಲು ಪ್ರಯತ್ನಿಸಿದುದು. ಅಷ್ಟು ಚೆನ್ನಾಗಿ ಬರಲಿಲ್ಲ.” ಎಂದು ಎದುರಿನ ಗೋಡೆಯ ಮೇಲೆ ತೂಗು ಹಾಕಿದ ಭಾರತದ ಕೌಸ್ತುಭ, ಮಹಾವೀರ ಲೋಕಮಾನ್ಯ ತಿಲಕರ ಚಿತ್ರವನ್ನು ತೋರಿಸಿದಳು.

ಲಕ್ಷ್ಮಿಯು ಅದನ್ನು ಬಹಳ ಹೊತ್ತು ನೋಡುತ್ತ ನಿಂತಳು. ಬಳಿಕ ಆಕೆಯು ಮೆಲ್ಲಗೆ “ಗುರುತು ಸಿಕ್ಕಲಿಲ್ಲ, ನನ್ನ ದೋಷ ಕಮಲಾ, ನಿನ್ನದಲ್ಲ. ನನಗೆ ಈ ಕಲೆಯನ್ನು ಕಲಿಸುವೆಯಾ ಕಮಲಾ? ಇದನ್ನು ನೀನು ಕಲಿಸಿದರೆ ನಾನು ನಿನ್ನನ್ನು ಗುರುವೆಂದು ಒಪ್ಪುವೆನು.” ಎಂದಳು.

ನಡುವಿನ ಸೊಸೆಯು ನಗತೊಡಗಿದಳು. ಆ ದಿನ ಮೂರು-ನಾಲ್ಕು ಗಂಟೆಗಳ ನಂತರ ಲಕ್ಷ್ಮಿಯು ಮನೆಗೆ ಹಿಂತಿರುಗಿ ಬಂದಳು. ಬರುವಾಗ ನಾಳೆಯಿಂದ ದಿನಾಲು ಆ ಶಿಲ್ಪಕಲೆಯನ್ನು ತಾನು ಕಲಿಯು ಬೇಕೆಂದು ನಿರ್ಧರಿಸಿದ್ದಳು.

ಕಮಲೆಯ ಮನೆಗೆ ಲಕ್ಷ್ಮಿಯು ಈ ಶಿಲ್ಪವಿದ್ಯೆಯನ್ನು ಕಲಿಯಲು ಹೋಗತೊಡಗಿದಳು. ಹತ್ತು ಹದಿನೈದು ದಿನ ಹೋದಳು. ಆಗ ಈ ಕಲೆಯು ಕಲಿಯಲು ಕಠಿನವಿಷ್ಟೇ ಇಲ್ಲ, ಇದಕ್ಕೆ ಬಹಳ ಸಮಯವೂ ಹತ್ತುವುದು ಎಂಬುದನ್ನು ಮನಗಂಡಳು. ಒಂದು ದಿನ ಲಕ್ಷ್ಮಿಯೆಂದಳು “ಕಮಲಾ,ನೀನು ನನಗೆ ಮನಗೊಟ್ಟು ಕಲಿಸುವುದಿಲ್ಲ.”

“ಬಹಳ ದಿನ ಬೇಕು ಜೀಜೀ. ನೀವು ಮತ್ತೆ ಬೇರೆ ಬೇರೆಯ ಹೆಣಿಕೆಯ ಕೆಲಸವನ್ನು ಮೊದಲು ಕಲಿಯುವುದು ಒಳಿತು ಜೀಜೀ.”

ಲಕ್ಷ್ಮಿಯು ಮನದಲ್ಲೇ ಕೋಪಿಸಿದಳು. ಅದನ್ನು ಆಕೆಯು ಹೊರಗೆ ತೋರಗೊಡದೆ “ಇದನ್ನು ಕಲಿಯಲು ನಿನಗೆಷ್ಟು ದಿನ ಹಿಡಿದುವು ಕಮಲಾ?” ಎಂದು ಕೇಳಿದಳು.

"ನನಗಾರೂ ಕಲಿಸಿಲ್ಲ ಜೀಜೀ, ಸ್ವತಃ ಪ್ರಯತ್ನದಿಂದಲೇ ಅಲ್ಪ ಸ್ವಲ್ಪವಾಗಿ ಕಲಿತೆ— "

"ಆದ್ದರಿಂದಲೇ. ನೀನೂ ಬೇರೆಯವರಿಂದ ಕಲಿತಿದ್ದರೆ ಲೆಕ್ಕ ಹಾಕುತ್ತಿದ್ದೆ."

ಬಾಯಿಂದ ಲಕ್ಷ್ಮಿಯು ಒಪ್ಪದಿದ್ದರೂ ತನಗಿಂತ ನಡುವಿನ ಸೊಸೆಯು ತೀಕ್ಷ್ಣ ಬುದ್ಧಿಯಲ್ಲಿ ಮೇಲು, ಆಕೆಯ ಎದುರಿಗೆ ಸರಿಸಮಾನವಾಗಿ ತಾನು ನಿಲ್ಲಲಾರೆ ಎಂಬುದನ್ನು ಮನದಲ್ಲಿಯೆ ಅನುಭವಿಸಿದಳು. ಈ ದಿನ ಆಕೆಯ ಕಲಿಯುವಿಕೆಯು ಮುಂದೆ ಸಾಗದಾಯಿತು. ಈ ದಿನ ಬಹಳ ಮೊದಲೇ ಸೂಜಿ, ದಾರ, 'ಪ್ಯಾಟರ್ನ' ತೆಗೆದುಕೊಂಡು ಮನೆಗೆ ಆಕೆಯು ಹೋದಳು. ಮರುದಿನ ಹೋಗಲೇ ಇಲ್ಲ. ಇಷ್ಟು ದಿನಗಳಲ್ಲಿ ಆಕೆಯು ಮೊಟ್ಟಮೊದಲು ತಪ್ಪಿಸಿದುದು ಇದೇ ದಿನ.

ಮೂರು-ನಾಲ್ಕು ದಿನಗಳ ನಂತರ ಪುನಃ ರಾಜಲಕ್ಷ್ಮಿಯು ಸೂಜಿ, ದಾರ, ಪ್ಯಾಟರ್ನ್ ಮೊದಲಾದವುಗಳಿಂದ ತುಂಬಿದ ಪೆಟ್ಟಿಗೆಯನ್ನು ತೆಗೆದುಕೊಂಡು ಕಮಲೆಯ ಮನೆಗೆ ಹೋದಳು. ನಡುವಿನ ಸೊಸೆಯು ತನ್ನ ಮಗನಿಗೆ ತುಲಸೀದಾಸ ರಾಮಾಯಣದೊಳಗಿನ ಚಿತ್ರಗಳನ್ನು ತೋರಿಸುತ್ತ ಕತೆಯನ್ನು ಹೇಳುತ್ತ ಕುಳಿತಿದ್ದಳು. ಲಕ್ಷ್ಮಿಯನ್ನು ನೋಡುತ್ತಲೇ ಎದ್ದು ಆಸನವನ್ನು ಹಾಸಿಕೊಟ್ಟಳು. ಉದ್ವಿಗ್ನ ಕಂಠದಿಂದ ಕಮಲೆಯು "ಎರಡು ಮೂರು ದಿನಗಳಿಂದ ಬರಲೇ ಇಲ್ಲ, ಪ್ರಕೃತಿ ಚೆನ್ನಾಗಿದ್ದಿಲ್ಲವೇನು ಜೀಜೀ?" ಎಂದು ಪ್ರಶ್ನಿಸಿದಳು.

"ಇಲ್ಲ. ಹೀಗೆಯೆ ಐದಾರು ದಿನ ಬರಲಿಲ್ಲ." ಎಂದು ಗಂಭೀರವಾಗಿ ಲಕ್ಷ್ಮಿಯು ಉತ್ತರವಿತ್ತಳು.

ಕಮಲೆಯು ಆಶ್ಚರ್ಯವನ್ನು ಪ್ರಕಟಗೊಳಿಸುತ್ತ "ಐದಾರು ದಿನ ಬರಲಿಲ್ಲವೆ? ಇಷ್ಟು ದಿನಗಳಾದವೆಂದು ನನಗೆನಿಸಲಿಲ್ಲ. ಇವೊತ್ತು ಎರಡು ಗಂಟೆ ಹೆಚ್ಚು ಕಲಿಸಿ ಹಿಂದೆ ಉಳಿದುದನ್ನು ಪೂರ್ಣ ಮಾಡಬೇಕನ್ನುವೆ." ಎಂದಳು.

“ ಹೂಂ. ಆದರೆ ನಡುವಿನ ಸೊಸೆಯು, ನನ್ನ ಪ್ರಕೃತಿಯು ಕೆಟ್ಟಿರಬಹುದೆಂದು ಎನಿಸಿದ್ದರೆ ಸ್ವಲ್ಪ ಬಂದು ವಿಚಾರಿಸಬಹುದಾಗಿತ್ತಲ್ಲ ? ”

ಕಮಲೆಯು ನಾಚಿಕೆ ಪಟ್ಟುಕೊಂಡು “ ಹೌದು, ಆದರೆ ಮನೆ-ಗೆಲಸ ಬಹಳವಿರುತ್ತದೆ— ನಾನು ಒಬ್ಬಳೇ, ಯಾರನ್ನು ಕಳಿಸಿ ವಿಚಾರಿಸಬಲ್ಲೆ ನೀವೇ ಹೇಳಿರಿ ? ಆದರೆ, ನನ್ನಿಂದ ಅವಶ್ಯ ತಪ್ಪಾಗಿದೆ. ನಾನು ನನ್ನ ತಪ್ಪನ್ನು ಒಪ್ಪಿಕೊಳ್ಳುವೆ ಜೀಜೀ. ” ಎಂದಳು.

ಲಕ್ಷ್ಮಿಯು ಮನದಲ್ಲಿಯೆ ಸಂತೋಷಪಟ್ಟುಕೊಂಡಳು. ಈ ಕೆಲವು ದಿನಗಳಿಂದ ಅತ್ಯಂತ ಅಭಿಮಾನಕ್ಕೆ ಕಟ್ಟುಬಿದ್ದು ಲಕ್ಷ್ಮಿಯು ಬಂದಿರಲಿಲ್ಲ. ಮೇಲಾಗಿ ‘ ಇವೊತ್ತು, ನಾಳೆ ’ ಯೆಂದು ಆಕೆಯು ದಿನಗಳನ್ನು ಕಳೆದಿದ್ದಳು. ಈ ನಡುವಿನ ಸೊಸೆಯನ್ನು ಬಿಟ್ಟು ತನ್ನ ಮನೆಯಲ್ಲಿ ಮತ್ತು ಇಡಿ ಊರಲ್ಲಿ ಮನಃಪೂರ್ವಕವಾಗಿ ಹಾಗೂ ಮನಬಿಚ್ಚಿ ಯಾರೊಡಯೂ ಆಕೆಗೆ ಮಾತನಾಡಲು ಮನಸ್ಸಿರಲಿಲ್ಲ. ಅದೇಕೊ ಏನೊ. ಕಮಲೆಯೊಬ್ಬಳೇ ಈ ಊರಲ್ಲಿ ತನ್ನ ದರ್ಜೆಗೆ ಸರಿಯಾದ ಹೆಂಗುಸೆಂದು ಆಕೆಯು ತಿಳಿದಿರಬಹುದು.

ಹುಡುಗ ತಾನಾಗಿಯೆ ಚಿತ್ರಗಳನ್ನು ನೋಡುತ್ತಿದ್ದ. ರಾಜ-ಲಕ್ಷ್ಮಿಯು ಅವನನ್ನು “ ನಿಖಿಲ, ನನ್ನ ಬಳಿಗೆ ಬಾ ಸ್ವಲ್ಪ, ಮಗೂ ! ” ಎಂದು ಕರೆದಳು.

ಅವನು ಆಕೆಯ ಬಳಿಗೆ ಹೋದ. ಲಕ್ಷ್ಮಿಯು ತನ್ನ ಪೆಟ್ಟಿಗೆಯನ್ನು ತೆರೆದು ಒಂದು ತೆಳುವಾದ ಚಿನ್ನದ ಸರವನ್ನು ಹೊರತಗೆದಳು; ಅದನ್ನು ಅವನ ಕೊರಳೊಳಗೆ ಹಾಕಿ “ ಹೋಗು, ಆಡಹೋಗು. ” ಎಂದಳು.

ತಾಯಿಯ ಮೊಗವು ಗಂಭೀರವಾಯಿತು. ಆಕೆಯು “ನೀವು ಆ ಸರವನ್ನು ಅವನಿಗೆ ಕೊಟ್ಟುಬಿಟ್ಟಿರಾ ? ” ಎಂದಳು.

ಲಕ್ಷ್ಮಿಯು ಅರಳಿದ ಮೊಗದಿಂದ “ ಅಲ್ಲದೆ ಮತ್ತೇನು ? ” ಎಂದಳು.

"ನೀವು ಕೊಟ್ಟ ಕ್ಷಣಕ್ಕೆ ಅವನೇಕೆ ತೆಗೆದುಕೊಳ್ಳುವ?"

ಲಕ್ಷ್ಮಿಯು ನಾಚಿಕೆ ಪಟ್ಟುಕೊಂಡು "ದೊಡ್ಡಮ್ಮಾ ಒಂದು ಸರವನ್ನು ಕೂಡ ಕೊಡಲಾರಳೆ?" ಎಂದಳು.

"ಅದು ನನಗೆ ತಿಳಿಯದು ಜೀಜೀ. ಆದರೆ, ತಾಯಿಯಾಗಿ ನಾನು ಆವನಿಗೆ ಅದನ್ನು ಸ್ವೀಕರಿಸಗೊಡಲಾರೆ ಎಂಬುದನ್ನು ಮಾತ್ರ ಬಲ್ಲೆ. ನಿಖಿಲ, ಅದನ್ನು ತೆಗೆದು ದೊಡ್ಡಮ್ಮನವರಿಗೆ ಕೊಟ್ಟುಬಿಡು. ಜೀಜೀ, ನಾವು ಬಡವರು; ಆದರೆ, ಯಾವುದಾದರೂ ಒಂದು ಬೆಲೆಯುಳ್ಳ ವಸ್ತುವು ದೊರೆಯುವಂತಿರುವಾಗ ಕೈಯನ್ನು ಮುನ್ನೀಡಲಿಕ್ಕೆ ಭಿಕ್ಷುಕರಲ್ಲ. ಹೀಗೆ ಆಗದು ಜೀಜೀ."

ಲಕ್ಷ್ಮಿಯು ಹಂಗಾದಳು. ಈ ದಿನವೂ ಆಕೆಯ ಮನವು ಎನ್ನ ತೊಡಗಿತು "ಭೂಮಿ ತಾಯೀ, ಬಾಯ ತೆರೆ!"

ಹೋಗುವಾಗ ಲಕ್ಷ್ಮಿಯು ಒಂದು ಮಾತನ್ನು ಹೇಳಿಹೋದಳು "ಆದರೆ ಈ ಮಾತು ನಿನ್ನ ಹಿರಿಯ ಭಾವನವರ ಕಿವಿಯ ವರೆಗೆ ಹೋಗುವುದು ಕಮಲಾ!" ಎಂದು.

"ನನ್ನ ಕಿವಿಯ ವರೆಗೆ ಅವರ ಅನೇಕ ಮಾತುಗಳು ಬರುತ್ತವೆ. ಆದರೆ, ನನ್ನದೊಂದು ಮಾತು ಅವರ ಕಿವಿಯ ವರೆಗೆ ಹೋದರೆ ಅವರ ಕಿವಿಗಳು ಅಪವಿತ್ರವಾಗುವುದಿಲ್ಲ."

"ಒಳ್ಳೇದು, ಪರೀಕ್ಷಿಸಿ ನೋಡಿದರೆ ತಿಳಿಯುವುದು." ಎಂದು ಸ್ವಲ್ಪ ತಡೆದು ಲಕ್ಷ್ಮಿಯೆಂದಳು "ಸುಮ್ಮಸುಮ್ಮಗೆ ಅಪಮಾನ ಮಾಡಬೇಕಾಗಿರಲಿಲ್ಲ ಕಮಲಾ. ನಾನೂ ಶಿಕ್ಷಿಸುವುದನ್ನು ಬಲ್ಲೆ."

"ಇದು ತಾವು ಕೋಪಿಸಿಕೊಂಡು ಆಡಿದ ಮಾತು. ಇಲ್ಲ, ನಾನೆಂದೂ ನಿಮಗೆ ಅಪಮಾನ ಮಾಡಿಲ್ಲ. ಆದರೆ, ನಿಮಗೆ ನನ್ನ ಪತಿಯನ್ನು ಅಪಮಾನಗೊಳಿಸಲು ಎಡೆಗೊಡಲಿಲ್ಲ ಅಷ್ಟೇ. ಇಷ್ಟನ್ನು ಅರಿಯುವಷ್ಟು ಶಿಕ್ಷಣವು ನಿಮಗೆ ದೊರೆತಿದೆ."

"ಅದೇನೊ ದೊರೆತಿದೆ, ಆದರೆ ನಿಮ್ಮಂತಹ ಹಳ್ಳಿಯ ಹೆಣ್ಣು ಮಕ್ಕಳೊಡನೆ ಜಗಳಾಡುವ ಶಿಕ್ಷಣವೊಂದು ಮಾತ್ರ ದೊರೆತಿಲ್ಲ."

ನಡುವಿನ ಸೊಸೆಯು ಈ ಕಟುನುಡಿಗೆ ಉತ್ತರವನ್ನೀಯಲಿಲ್ಲ; ಸುಮ್ಮಗಿದ್ದಳು.

ಲಕ್ಷ್ಮಿಯು ಹೊರಡುವ ಸಿದ್ಧತೆಯನ್ನು ಮಾಡಿಕೊಂಡು "ಈ ಚಿನ್ನದ ಸರದ ಬೆಲೆಯು ಅದೆಷ್ಟೇ ಇರಲಿ, ನಾನು ಹುಡುಗನಿಗೆ ಪ್ರೀತಿಯಿಂದ ಕೊಟ್ಟಿದ್ದೆ. ನಿನ್ನ ಪತಿಯು ಕಷ್ಟವನ್ನು ದೂರ ಮಾಡಬೇಕೆಂಬ ಉದ್ದೇಶದಿಂದ ಕೊಟ್ಟಿರಲಿಲ್ಲ. ಕಮಲಾ, ದೊಡ್ಡವರು ಬಡವರ ಅಪಮಾನ ಮಾಡುತ್ತ ತಿರುಗುವರೆಂಬ ಮಾತನ್ನು ನೀನು ಕಲಿತಿರುವೆ—ಅವರು ಪ್ರೀತಿಯನ್ನು ಕೂಡ ಮಾಡಬಲ್ಲರೆಂಬುದನ್ನು ನೀನು ಕಲಿತಿಲ್ಲ. ನೀನು ಇದನ್ನೂ ಕಲಿಯಬೇಕಾದುದು ಅಗತ್ಯ ....... ... ಬಳಿಕ ಹೋಗಿ ಕೈಕಾಲು ಹಿಡಿದುಕೊಳ್ಳುತ್ತ ತಿರುಗಾಡಬೇಡ." ಎಂದಳು. ಇದಕ್ಕೆ ಉತ್ತರವಾಗಿ ಕಮಲೆಯು ಕೇವಲ ಸ್ವಲ್ಪ ನಕ್ಕು "ಇಲ್ಲ ಜೀಜೀ, ಇದರ ಅಂಜಿಕೆ ನಿಮಗೆ ಬೇಡ." ಎಂದಳು.

೩

ನದಿಗೆ ಮಹಾಪೂರವು ಬಂದುದರಿಂದ ಮಣ್ಣಿನಿಂದ ಹಾಕಿದ ಒಡ್ಡು ಒಡೆಯತೊಡಗಿತು. ಮೊದಲು ಚಿಕ್ಕದಾಗಿದ್ದ ಒಡಕು ಒಂದೇ ಸವನೆ ಹರಿಯುತ್ತಿರುವ ಪ್ರವಾಹದಿಂದ ಇಷ್ಟು ಕಡಿಮೆ ಸಮಯದಲ್ಲಿ ಒಡ್ಡನ್ನು ಒಡೆಯುವಷ್ಟು ದೊಡ್ಡದಾಗುವುದೆಂಬ ಕಲ್ಪನೆಯು ಮೊದಲು ಯಾರಿಗೂ ಇರಲಿಲ್ಲ. ಸರಿಯಾಗಿ ಇದೇ ಬಗೆಯ ಸಂಗತಿಯು ರಾಜಲಕ್ಷ್ಮಿಯ ಮನೆಯಲ್ಲಿ ಸಂಭವಿಸಿತು. ಪತಿಯ ಎದುರು ಆಕೆಯು ವಿಪಿನನ ಮತ್ತು ಅವನ ಹೆಂಡತಿಯ ವಿಷಯದಲ್ಲಿ ಆಕ್ಷೇಪಣೆಯ ಮಾತುಗಳನ್ನು ಹೇಳಿ ಮುಗಿಸಿದ ಬಳಿಕ ಮುಂದಾಗುವ ಪರಿಣಾಮದ ಕಲ್ಪನೆಯು ಆಕೆಗೆ ಬಂದಿತು, ಆಕೆಯು ಅಂಜಿದಳು. ಆಕೆಗೆ ನುಗ್ಗಾಡುವ

ಅಭ್ಯಾಸವಿಲ್ಲ, ಆಡಬಯಸಿದರೂ ಆಕೆಗೆ ದೊರೆತ ಶಿಕ್ಷಣವೂ ಮರ್ಯಾದೆಯೂ ಅಡ್ಡಬರುವುವು. ನೀರಿನ ಪ್ರವಾಹದಂತೆ ಒಮ್ಮೆಗೆ ಆಕೆಯ ಬಾಯಿಂದ ಹೊರಟ ಮಾತುಗಳಲ್ಲಿ ಬಹಳ ಮಾತುಗಳು ಸತ್ಯವಿರಲಿಲ್ಲ ಎಂಬುದು ಆಕೆಗೆ ತಿಳಿಯಲಾರದೆ ಹೋಯಿತು. ಆದರೆ ಆ ಮಾತಿನ ಗತಿಯನ್ನು ತಡೆಯುವ ಸಾಮರ್ಥ್ಯವೂ ತನ್ನಲ್ಲಿಲ್ಲವೆಂಬುದು ತಿಳಿಯದೆ ಇರಲಿಲ್ಲ ಆಕೆಗೆ. ತನ್ನ ಪತಿಯ ಸ್ವಭಾವದ ಪರಿಚಯವು ತನಗೆ ಸರಿಯಾಗಿ ಇಲ್ಲವೆಂಬುದು ಆಕೆಗೆ ತಿಳಿಯಲಿಲ್ಲ. ಆಕೆಯ ಗಂಡನ ಸ್ವಭಾವ ನಿಷ್ಠುರವಾಗಿತ್ತು, ಅಷ್ಟೇ ಪ್ರತಿಹಿಂಸಾ-ಪರಾಯಣವಾಗಿತ್ತು, ಕಾಡು ಮನುಷ್ಯರಂತಿತ್ತು. ಯಾರಿಗಾದರೂ ಕಷ್ಟವನ್ನು ಕೊಡುವುದಾಗಿದ್ದರೆ ಅದರ ಎಲ್ಲೆ ಯಾವುದು ಎಂಬುದು ಸಹ ಅವನಿಗೆ ಗೊತ್ತಿರಲಿಲ್ಲ. ಈ ದಿನ ಶಿವಚರಣ ಹಾರಾಡಲಿಲ್ಲ– ಜಿಗಿದಾಡಲಿಲ್ಲ, ಕೇವಲ ಇಷ್ಟೇ ಎಂದ ‘‘ ಒಳ್ಳೇದು, ಇಂದಿಗೆ ಆರು ತಿಂಗಳ ನಂತರ ನೋಡು. ಅವನಿಗೆ ಮುಂದಿನ ವರುಷವನ್ನು ಕಾಣುವ ಯೋಗವು ಒದಗಲಿಕ್ಕಿಲ್ಲ ಎಂದು ತಿಳಿದುಕೊ. ’’

ಅಪಮಾನ ಮತ್ತು ನಾಚಿಕೆಯ ಅಗ್ನಿ ರಾಜಲಕ್ಷ್ಮಿಯ ಅಂತಃಕರಣದಲ್ಲಿ ಸುಡುತ್ತಿತ್ತು. ವಿಪಿನನ ಹೆಂಡತಿಗೆ ಸರಿಯಾದ ಶಿಕ್ಷೆಯು ದೊರೆಯಲೆಂದು ಆಕೆಯು ಬಯಸುತ್ತಿದ್ದಳು. ಆದರೆ ಶಿವಚರಣನು ಹೊರಗೆ ಹೋದಬಳಿಕ ಅವನು ಆಡಿದ ಮಾತುಗಳನ್ನು ಆಗಾಗ್ಗೆ ಆಕೆಯು ಉಚ್ಚರಿಸಿದರೂ ಆಕೆಗೆ ಸಮಾಧಾನವಾಗಲಿಲ್ಲ. ಯಾವುದೊ ಒಂದು ಮಹಾಪರಾಧವಾಗಿದೆಯೆಂದು ಆಕೆಗೆ ಎನಿಸತೊಡಗಿತು.

ಕೆಲವು ದಿನಗಳಾದ ಬಳಿಕ ರಾಜಲಕ್ಷ್ಮಿಯು ಪತಿಯ ಕೂಡ ಮಾತನಾಡುತ್ತಿರುವಾಗ ನಗುತ್ತ ಕೇಳಿದಳು ‘‘ ಆ ಜನರ ವಿಷಯದಲ್ಲಿ ಏನಾದರೂ ಮಾಡಿಸಿರುವಿರಾ ? ’’

“ ಯಾವ ಜನರ ವಿಷಯವಾಗಿ ? ”

“ ವಿಪಿನ ವೈದುನರ ವಿಷಯವಾಗಿ. ”

ಶಿವಚರಣ ನಿಸ್ಪೃಹಭಾವದಿಂದ "ಏನು ಮಾಡಿಸಬಲ್ಲೆ, ಏನು ಮಾಡಬಲ್ಲೆ? ನಾನು ಒಬ್ಬ ಸಾಮಾನ್ಯ ಮನುಷ್ಯ." ಎಂದ.

ರಾಜಲಕ್ಷ್ಮಿಯು ಉದ್ವಿಗ್ನಳಾಗಿ "ಇದರ ಅರ್ಥವೇನು?" ಎಂದಳು.

"ನಡುವಿನ ಸೊಸೆಯು ಹೇಳುತ್ತಿರುವಳಲ್ಲವೆ— ರಾಜ್ಯ ನನ್ನದಲ್ಲ ವೆಂದು! ಇಂಗ್ರೇಜೀ ಸರಕಾರದ್ದೆಂದು!"

"ಹೀಗೆಂದಿರುವಳೇನು? ಆದರೆ, ಒಳ್ಳೇದು— "

"ಒಳ್ಳೆಯದೇನು?"

ಹೆಂಡತಿಯು ಸ್ವಲ್ಪ ಸಂದೇಹವನ್ನು ಪ್ರದರ್ಶಿಸುತ್ತ "ಆದರೆ, ನಡುವಿನ ಸೊಸೆಯು ಈ ತರಹದ ಮಾತುಗಳನ್ನು ಎಂದೂ ಆಡುವುದಿಲ್ಲ. ಬಹಳ ಚುರುಕು ಇರುವಳೇನು? ಜನರು ಹೀಗೆಯೆ ಬೆಳಸಿ, ಮಸಾಲೆ ಹಚ್ಚಿ ಚಾಡಿ ಹೇಳುತ್ತಾರೆ" ಎಂದಳು.

"ಇದರಲ್ಲಿ ಆಶ್ಚರ್ಯ ಪಡುವಂತಹದೇನುಂಟು? ಆದರೆ ನಾನು ಈ ನುಡಿಯನ್ನು ನನ್ನ ಕಿವಿಯಿಂದಲೇ ಕೇಳಿರುವೆ."

ರಾಜಲಕ್ಷ್ಮಿಗೆ ಈ ಮಾತಿನ ಮೇಲೆ ನಂಬಿಕೆಯಾಗಲಿಲ್ಲ. ಆದರೆ, ಆಗ ಕೇವಲ ಗಂಡನ ಮನಸ್ಸನ್ನು ಸಮಾಧಾನಗೊಳಿಸುವುದಕ್ಕಾಗಿ ಕೋಪವನ್ನು ತೋರಿಸುತ್ತ "ಏನು ಹೇಳುತ್ತಿರುವಿರಿ? ಇಷ್ಟು ಅಹಂಕಾರ! ನನಗೆ ಏನೆಂದಳೊ ಎಂದಳು, ಆದರೆ ನೀವು ಭಾವನವರು, ನಿಮ್ಮನ್ನೂ ಅವಮಾನಗೊಳಿಸಬೇಕೆ?" ಎಂದಳು.

"ಹಿಂದೂಗಳ ಮನೆಯಲ್ಲಿ ಎಲ್ಲರೂ ಹೀಗೆಯೆ ಎನ್ನುವರು. ಓದು-ಬರೆಹ ಬಲ್ಲ ವಿದ್ವಾಂಸ ಹೆಂಗುಸಲ್ಲವೆ! ಆದುದರಿಂದಲೇ ಇಷ್ಟು ಮಾತು! ಆದರೆ ನನಗೆ ಅಪಮಾನ ಮಾಡಿ ಯಾವನೂ ಬದುಕಲಾರ. ಹೊರಗೆ ಸ್ವಲ್ಪ ಕೆಲಸವಿದೆ, ನಾನು ಹೋಗುವೆ." ಎಂದು ಶಿವಚರಣ ಹೊರಗೆ ಹೋಗಿಬಿಟ್ಟ. ಯಾವ ರೀತಿಯಾಗಿ ಮಾತನ್ನು ಹೇಳ ಬೇಕೆಂದು ರಾಜಲಕ್ಷ್ಮಿಯು ಬಯಸಿದ್ದಳೊ ಹಾಗೆ ಹೇಳದಾದಳು.

ಆದರೆ ಮಾತು ತಿರುವುಮುರುವು ಆಯಿತು ಎಂದು ಗಂಡನು ಹೋದ
ಮೇಲೆ ಆಕೆಯೂ ಮನದಲ್ಲಿಯೆ ವಿಚಾರ ಮಾಡತೊಡಗಿದಳು.

ಹೊರಗಿನ ಕಚೇರಿಗೆ ವಿಪಿನನ್ನು ಶಿವಚರಣ ಕರೆಯಿಸಿ “ ಐದಾರು
ವರ್ಷಗಳಿಂದ ನಿನಗೆ ಹೇಳುತ್ತ ಬಂದಿರುವೆ ವಿಪಿನ, ನಿನ್ನ ದನಕರು
ಗಳನ್ನು ಇಲ್ಲಿಂದ ಹೊಡೆದುಕೊಂಡು ಹೋಗೆಂದು. ರಾತ್ರಿ ನಿದ್ರೆ ಕೂಡ
ಮಾಡುವುದು ದುಸ್ತರವಾಗಿದೆ ನೀನು ನನ್ನ ಮಾತುಗಳನ್ನು ಕೇಳಬಾರ
ದೆಂದು ನಿರ್ಧರಿಸಿರುವೆಯೇನು ? ” ಎಂದ.

ವಿಪಿನ ಅಚ್ಚರಿಗೊಂಡು ‘‘ಎಲ್ಲಿಗೆ, ನಾನೊಂದು ಬಾರಿಯೂ
ಕೇಳಿಲ್ಲವಲ್ಲ ? ’’ ಎಂದ. ಶಿವಚರಣ ಬಹಳ ಸುಲಭವಾಗಿ ‘‘ನಾನೇ
ನನ್ನ ಬಾಯಿಂದ ಸುಮಾರು ಹತ್ತು ಸಲವಾದರೂ ನಿನಗೆ ಹೇಳಿರ
ಬಹುದು. ನಿನಗೆ ನೆನಪಿಲ್ಲದಿದ್ದರೆ ಅದರಿಂದ ಯಾವ ಹಾನಿಯೂ
ಆಗುವುದಿಲ್ಲ. ಇಷ್ಟು ದೊಡ್ಡ ಜಮೀನುದಾರಿಯ ಮೇಲೆ ಅಧಿಕಾರವನ್ನು
ನಡೆಯಿಸುವವನ ಮಾತನ್ನು ಮರೆಯುವುದರಿಂದ ಒಳ್ಳೆಯದಾಗುವುದಿಲ್ಲ.
ಒಳ್ಳೇದು, ಎರಡನೆಯವರ ಸ್ಥಳದಲ್ಲಿ ದನಗಳನ್ನು ಕಟ್ಟುವುದು ಒಳ್ಳೆಯ
ದಲ್ಲವೆಂಬ ವಿಷಯ ನಿನಗೆ ಗೊತ್ತಿರಬೇಕು. ನಾಳೆಯೇ ಇಲ್ಲಿಂದ
ಬೇರೆಡೆಗೆ ಹೊಡೆದುಕೊಂಡು ಹೋಗಬೇಕು. ನನಗೆ ಬಿಡುವು ಸಿಕ್ಕುವು
ದಿಲ್ಲ, ಕೊನೆಯ ಬಾರಿ ನಿನಗೆ ಎಚ್ಚರಿಕೆ ಕೊಟ್ಟಿರುವೆ. ’’ ಎಂದ.

ವಿಪಿನನ ಬಾಯಿಂದ ಮಾತು ಬರುವುದು ಕಡಮೆ. ಈ ಅಚ್ಚರಿಯ
ಮಾತುಗಳನ್ನು ಕೇಳಿ ಅವನು ಮೂಕನಂತಾದ. ತನ್ನ ಮುತ್ತಾತರ
ಕಾಲದಿಂದ ಆ ದನಗಳನ್ನು ಕಟ್ಟುವ ಸ್ಥಳವು ತನ್ನದೇ ಎಂದು ಅವನು
ತಿಳಿಯುತ್ತ ಬಂದಿರುವ. ಅದು ಅನ್ಯರದಲ್ಲವೆಂಬುದನ್ನು ನುಡಿಯದೇ
ಅವನು ಮನೆಗೆ ಹಿಂತಿರುಗಿ ಹೋದ. ಸುಳ್ಳು ಮಾತಿನ ವಿರುದ್ಧ
ವಾಗಿಯೂ ಒಂದು ಚಕಾರ ಶಬ್ದವನ್ನು ನುಡಿಯಲಿಲ್ಲ.

ಅವನ ಹೆಂಡತಿಯು ಎಲ್ಲ ಮಾತುಗಳನ್ನು ಕೇಳಿ ‘‘ಆದರೆ
ರಾಜರ ನ್ಯಾಯಾಲಯವು ತೆರೆದಿರುವುದಲ್ಲ ? ’’ ಎಂದಳು.

ವಿಪಿನ ಸುಮ್ಮಗಿದ್ದ. ಅವನು ಸಾಕಷ್ಟು ಒಳ್ಳೆಯ ಮನುಷ್ಯನಿದ್ದ. ಇಂಗ್ರೇಜಿ ಸರಕಾರದ ನ್ಯಾಯಾಲಯದ ಹೆಬ್ಬಾಗಿಲು ಎಷ್ಟೋ ವಿಶಾಲ ವಾಗಿ ತೆರೆದಿದ್ದರೂ ಅದರಲ್ಲಿ ಬಡವರಿಗೆ ಹೋಗಲು ಬರುವಂತೆ ದಾರಿಯು ತೆರೆದಿರುವುದಿಲ್ಲ ಎಂಬುದನ್ನು ಅವನು ತಿಳಿದಿದ್ದ. ಕೊನೆಗೆ ಆಗಬೇಕಾದುದೇ ಆಯಿತು. ಮರುದಿನ ಹಿರಿಯ ಜಮೀನುದಾರರ ಜನರು ಬಂದರು. ಅವರು ಸ್ವಲ್ಪ ಮುರಿದುಬಿದ್ದ ಗೋಶಾಲೆಯನ್ನು ಕೆಡವಿ ಸುತ್ತಲೂ ನಾಲ್ಕು ಗೋಡೆಗಳನ್ನು ಮಾತ್ರ ಬಿಟ್ಟರು. ವಿಪಿನ ಪೋಲೀಸ್ ಕಚೇರಿಗೆ ಹೋಗಿ ದೂರು ಹೇಳಿ ಬಂದ. ಆದರೆ ಆಶ್ಚರ್ಯ ವೇನಂದರೆ ಶಿವಚರಣನ ಇಟ್ಟಿಗೆಯ ಮನೆಯು ಆ ಸ್ಥಳದಲ್ಲಿ ಸಂಪೂರ್ಣ ಸಿದ್ಧವಾಗುವ ವರೆಗೆ ಕೆಂಪು ಟೊಪ್ಪಿಗೆಯ ಯಾವ ಪೋಲೀಸನೂ ಅತ್ತ ಸುಳಿಯಲಿಲ್ಲ. ವಿಪಿನನ ಹೆಂಡತಿಯು ಕೈಯಲ್ಲಿಯ ಚಿನ್ನದ ಬಳೆ ಗಳನ್ನು ಮಾರಿ ನ್ಯಾಯಾಲಯದಲ್ಲಿ ದಾವಾ ಮಾಡಿದಳು. ಇದರಿಂದ ಆಕೆಯ ಚಿನ್ನದ ಬಳೆಗಳು ಹೋದವೇ ವಿನಾ ಮತ್ತಾವ ಲಾಭವೂ ಆಗಲಿಲ್ಲ.

ನೆಂಟಸ್ತಿಕೆಯಲ್ಲಿ ಅತ್ತೆಯಾಗುವ ಒಬ್ಬ ಹಿತಚಿಂತಕಳು ಈ ಸಂಕಟ ಸಮಯದಲ್ಲಿ ವಿಪಿನನ ಹೆಂಡತಿಯ ಬಳಿಗೆ ಹೋಗಿ ರಾಜ-ಲಕ್ಷ್ಮಿಯ ಬಳಿಗೆ ಹೋಗಲು ಸಲಹೆಯನ್ನು ಕೊಟ್ಟಿದ್ದಳು. ಅದಕ್ಕೆ ಕಮಲೆಯು ಬಹುಶಃ ಹೀಗೆ ಉತ್ತರವಿತ್ತಿರಬಹುದು "ಸಿಂಹದ ಎದುರಿಗೆ ಕೈಜೋಡಿಸುವುದರಿಂದೇನು ಲಾಭ ಅತ್ತೆ ? ಜೀವ ಹೋಗುವುದು, ಹೋಗಿಯೇ ತೀರುವುದು. ಮೇಲಾಗಿ ಅಪಮಾನ ತಬ್ಬಿಕೊಳ್ಳುವುದು!"

ಈ ಮಾತು ರಾಜಲಕ್ಷ್ಮಿಯ ಕಿವಿಯ ವರೆಗೂ ಹೋಯಿತು. ಆದರೆ ಆಕೆಯು ಇವಕ್ಕೆ ಯಾವ ಉತ್ತರವನ್ನೂ ಕೊಡದೆ ಸುಮ್ಮಗೇ ಇದ್ದಳು.

ಕಾಶಿಯಿಂದ ಹವೆ–ನೀರು ಬದಲಾಯಿಸಿಕೊಂಡು ಬಂದಬಳಿಕ ಒಂದು ದಿನವೂ ರಾಜಲಕ್ಷ್ಮಿಯ ಪ್ರಕೃತಿಯು ಚೆನ್ನಾಗಿರಲಿಲ್ಲ. ಈ ಸಂಗ-ತಿಯು ಜರುಗಿದ ಬಳಿಕ ಪುನಃ ಆಕೆಗೆ ಜ್ವರ ಬರತೊಡಗಿದುವು. ಕೆಲವು

ದಿವಸ ಊರಲ್ಲಿಯೇ ಚಿಕಿತ್ಸೆ ನಡೆಯಿತು, ಲಾಭವೇನೂ ಆಗಲಿಲ್ಲ. ಡಾಕ್ಟರರ ಸಲಹೆಯ ಮೇರೆಗೆ ಪುನಃ ಆಕೆಯು ಹವೆಯ ಬದಲಾವಣೆಗಾಗಿ ಊರನ್ನು ಬಿಡಬೇಕಾದ ಪ್ರಸಂಗ ಬಂದಿತು.

ಕಾರ್ಯ ಬಾಹುಲ್ಯದ ಮೂಲಕ ಶಿವಚರಣ ಈ ಬಾರಿ ತನ್ನ ಹೆಂಡತಿಯ ಕೂಡ ಹೋಗದಾದ, ಊರಲ್ಲಿಯೇ ಇದ್ದ. ಹೋಗುವ ಮೊದಲು ರಾಜಲಕ್ಷ್ಮಿಯು ತನ್ನ ಪತಿಗೆ ಒಂದು ಮಾತನ್ನು ಹೇಳಲು ಚಡಪಡಿಸುತ್ತಿದ್ದಳು. ಆದರೆ ಬಾಯಿಬಿಚ್ಚಿ ಅವನ ಎದುರಿಗೆ ಹೇಳದಾದಳು. ಪತಿಗೆ ತನ್ನ ಮನದ ಮಾತನ್ನು ಹೇಳುವುದು ಪ್ರಯೋಜನ-ಕರವಾದುದಲ್ಲ, ನನ್ನ ಮಾತಿನ ಅರ್ಥವು ಅವರಿಗೆ ತಿಳಿಯದು ಎಂಬ ಅನುಭವವು ಆಗಾಗ್ಗೆ ಆಕೆಗೆ ಉಂಟಾಗತೊಡಗಿತು.

೪

ರಾಜಲಕ್ಷ್ಮಿಯು ರೋಗದಿಂದ ಪೂರ್ತಿಯಾಗಿ ಗುಣ ಹೊಂದಲು ಈ ಬಾರಿ ಬಹಳ ಸಮಯವು ತಗಲಿತು. ಸುಮಾರು ಒಂದು ವರ್ಷದ ನಂತರ ಆಕೆಯು ಬೇಲಪುರಕ್ಕೆ ಬಂದಳು. ಆಕೆಯು ಕೇವಲ ಜಮೀನು-ದಾರರ ಪ್ರಿಯಪತ್ನಿ ಅಷ್ಟೆ ಇಲ್ಲ, ದೊಡ್ಡಮನೆಯ ಯಜಮಾನಿಯೂ ಇರುವಳು. ಆದುದರಿಂದ ಬೀದಿಯ ಹೆಂಗುಸರೆಲ್ಲ ಆಕೆಯನ್ನು ಕಾಣಲು ತಂಡೋಪತಂಡವಾಗಿ ಬಂದರು. ಹಿರಿಯ ಹೆಂಗುಸರು ಆಕೆಗೆ ಆಶೀರ್ವಾದವಿತ್ತರು, ಚಿಕ್ಕವರು ವಾದಕ್ಕೆರಗಿದರು. ಬಾರದಿದ್ದವರಲ್ಲಿ ಕೇವಲ ವಿಪಿನನ ಹೆಂಡತಿಯೊಬ್ಬಳೆ. ಆಕಯು ಬರುವುದಿಲ್ಲವೆಂಬ ಮಾತನ್ನು ರಾಜಲಕ್ಷ್ಮಿಯು ಬಲ್ಲಳು. ಈ ಒಂದು ವರುಷದಲ್ಲಿ ವಿಪಿನನ ಮನೆಯವರು ಹೇಗಿದ್ದಾರೆ, ಅವರ ಬಗ್ಗೆ ನಡೆಯುತ್ತಿರುವ ಫೌಜದಾರೀ ಮತ್ತು ದಿವಾಣೀ ದಾವೆಗಳ ಪರಿಣಾಮವೇನಾಯಿತು ಎಂಬುದನ್ನು ಯಾರಿಂದಾದರೂ ತಿಳಿದುಕೊಳ್ಳಲು ಆಕೆಯು ಯತ್ನಿಸಲಿಲ್ಲ. ಶಿವಚರಣ ಒಮ್ಮೊಮ್ಮೆ ಮನೆಯಲ್ಲಿ, ಒಮ್ಮೊಮ್ಮೆ ಪಶ್ಚಿಮ ಭಾಗದಲ್ಲಿ ಹೆಂಡತಿಯನ್ನು ಭೆಟ್ಟಿಯಾಗಿ ಬರುತ್ತಿದ್ದ. ಆಗ ವಿಪಿನನ ಮನೆಯವರ ಬಗ್ಗೆ

ಪತಿಯನ್ನು ಕೇಳಬೇಕೆಂದು ಆಕೆಗೆ ಮನಸ್ಸಾದರೂ ಆಕೆಯು ಕೇಳಲಿಲ್ಲ. ಕೇಳಲು ಆಕೆಗೇ ಭಯವೆನಿಸುತ್ತಿತ್ತು. ಇಷ್ಟು ದಿವಸಗಳಲ್ಲಿ ಏನಾದರೊಂದು ನಿರ್ಣಯವಾಗಿರಬೇಕು, ಇವರ ಸಿಟ್ಟು ಅಷ್ಟು ತೀಕ್ಷ್ಣವಾಗಿ ಉಳಿದಿಲ್ಲ, ಕೇಳಿದರೆ ಮತ್ತೆಲ್ಲಿ ಅದು ಪ್ರಜ್ವಲಿಸಿ ಕೆಡುಕುಂಟಾದೀತೋ ಎಂಬ ಭಯ. ಈ ವಿಷಯಗಳು ಆಕೆಯ ಮನದಲ್ಲಿಯೇ ಉಳಿದುವು. ಅವು ತನಗೇ ನೆನಪೇ ಇಲ್ಲವೆಂಬಂತೆ ಆಕೆಯು ಇರತೊಡಗಿದಳು. ಇತ್ತ ಶಿವಚರಣನೂ ವಿಪಿನನ ಮಾತನ್ನು ಎತ್ತಿಲ್ಲ. ತಾನು ರಾಜಲಕ್ಷ್ಮಿಗೆ ಆದ ಅಪಮಾನವನ್ನು ಮರೆತಿಲ್ಲ, ಈ ಅವಧಿಯಲ್ಲಿ ಅದರ ಸೇಡನ್ನು ತೀರಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು ಎಂಬ ಮಾತುಗಳನ್ನು ಹೆಂಡತಿಯ ಎದುರಿನಲ್ಲಿ ಪ್ರಸ್ತಾಪಿಸಿಲ್ಲ, ಅವನ್ನು ಬಚ್ಚಿಟ್ಟಿರುವೆ; ಇವೆಲ್ಲವುಗಳನ್ನು ಲಕ್ಷ್ಮಿಯು ತನ್ನ ಕಣ್ಣಾರೆ ತಾನೇ ಕೊಂಡುಕೊಳ್ಳಲಿ ಎಂದು ಅವನು ಬಯಸಿದ್ದ. ಆಕಯು ತಾನೇ ಎಲ್ಲವನ್ನೂ ಅರಿತುಕೊಂಡುದನ್ನು ನೋಡಿ ತಾನು ಅತ್ಯಾನಂದವನ್ನು ಪಟ್ಟುಕೊಳ್ಳಬೇಕು ಎಂದು ಆತನ ಬಯಕೆ.

ಅತ್ತೆಯ ಸ್ನೇಹಪೂರ್ಣ ಮಾತಿನ ತಾಡನೆಯಿಂದ ರಾಜಲಕ್ಷ್ಮಿಯು ಹೊತ್ತು ಏರುವ ಮೊದಲು ಮೈತೊಳೆದುಕೊಂಡು ನಿಶ್ಚಿಂತಳಾಗಿರುವಾಗ ಅತ್ತೆಯು ಅತ್ಯಂತ ಚಿಂತೆಯನ್ನು ಪ್ರಕಟಿಸುತ್ತ “ಇನ್ನೂ ನಿನ್ನ ಶರೀರ ಅಶಕ್ತವಿದೆ ಸೊಸೆಯುರಸೀ, ನೀನು ಈಗಲೇ ಕೆಳಗೆ ಹೋಗಬೇಡ. ನಿನ್ನ ತಟ್ಟೆಯನ್ನು ಬಡಿಸಿ ಇಲ್ಲಿಗೇ ಕಳಿಸುತ್ತೇನೆ” ಎಂದಳು

ಲಕ್ಷ್ಮಿಯು ನಗುತ್ತ “ಈಗ ನನ್ನ ಶರೀರ ಮೊದಲಿನಷ್ಟೇ ಗುಣಹೊಂದಿದೆ ಅತ್ತೆಮ್ಮಾ, ನಾನು ಕೆಳಗೆ ಅಡುಗೆಯ ಮನೆಗೆ ಹೋಗಿ ಅಲ್ಲಿಯೇ ಉಣ್ಣುವೆ. ಎಲ್ಲವನ್ನೂ ಹೊತ್ತುಕೊಂಡು ಮೇಲಕ್ಕೆ ತರುವುದು ಅಗತ್ಯವಿಲ್ಲ. ನಡೆ, ಕೆಳಗೇ ಬರುವೆ.” ಎಂದಳು.

“ಶಿವೂ ಬೇಡವೆಂದು ಹೇಳಿದ್ದಾನೆ.” ಎಂದೆನ್ನುತ್ತ ಅತ್ತೆಯು ಆಕೆಯನ್ನು ತಡೆದಳು. ಆಕೆಯ ಅಪ್ಪಣೆಯ ಮೇರೆಗೆ ಸ್ಥಳವನ್ನು ಸ್ವಚ್ಛ ಮಾಡಿ ಆಳುಮಗಳು ಮಣೆಹಾಕಿ ಹೋದಳು. ಕೂಡಲೇ ಅಡುಗೆಯವಳು

ಭೋಜನವನ್ನು ತೆಗೆದುಕೊಂಡು ಬಂದಳು. ಆಕೆಯು ತಟ್ಟೆಯನ್ನು ಇಟ್ಟು ಹೋದ ಬಳಿಕ ಲಕ್ಷ್ಮಿಯು ಮಣೆಯ ಮೇಲೆ ಕುಳಿತುಕೊಳ್ಳುತ್ತ "ಈ ಅಡುಗೆಯಾಕೆ ಯಾರು ಅತ್ತೆಮ್ಮ? ಮೊದಲು ಎಂದೂ ಈಕೆಯನ್ನು ಕಂಡಿಲ್ಲ." ಎಂದಳು.

ಅತ್ತೆಯು ನಕ್ಕು "ಗುರುತಿಸಲಾರೆಯಾ ನನ್ನ ಸೊಸೆಯರಸಿ, ಈಕೆ ವಿಪಿನನ ಹೆಂಡತಿ" ಎಂದಳು.

ರಾಜಲಕ್ಷ್ಮಿಯು ಸ್ತಬ್ಧಳಾಗಿ ಕುಳಿತಳು. ತನ್ನನ್ನು ಒಮ್ಮೆಲೆ ಆಶ್ಚರ್ಯ ಚಕಿತ ಮಾಡಲು ಇಷ್ಟೆಲ್ಲ ಒಳಸಂಚನ್ನು ನಡೆಯಿಸಿರಬಹುದೆಂಬುದನ್ನು ಆಕೆಯು ಮನದಲ್ಲಿಯೆ ತಿಳಿದುಕೊಂಡಳು. ತನ್ನನ್ನು ಸಂಬಾಳಿಸಿಕೊಂಡು ಜಿಜ್ಞಾಸು ದೃಷ್ಟಿಯಿಂದ ಅತ್ತೆಯ ಕಡೆಗೆ ನೋಡತೊಡಗಿದಳು.

"ವಿಪಿನ ಸತ್ತುಹೋಗಿರುವ. ಕೇಳಿರಬಹುದಲ್ಲವೆ?"

ಲಕ್ಷ್ಮಿಯು ಏನನ್ನೂ ಕೇಳಿರಲಿಲ್ಲ; ಈಗ ತಟ್ಟೆಯನ್ನು ಬಡಿಸಿ ತಂದು ಇಟ್ಟ ಹೋದಾಕೆಯನ್ನು ನೋಡಿದರೆ ತಿಳಿಯುವುದು. ಆಕೆಯು ತಲೆಯಲ್ಲಾಡಿಸಿ "ಹೂಂ" ಎಂದಳು.

ಅತ್ತೆಯು ಎಲ್ಲ ಸಂಗತಿಯನ್ನು ವರ್ಣಿಸುತ್ತ "ಇದ್ದುದನ್ನೆಲ್ಲ ದಾವಾದಲ್ಲಿ ವೆಚ್ಚಮಾಡಿ ವಿಪಿನ ಸತ್ತು ಹೋದ. ಉಳಿದ ರೂಪಾಯಿಗಳನ್ನು ಕೊಡಲಿಕ್ಕೆ ಇದ್ದ ಒಂದು ಮನೆಯೂ ಹೊರಟುಹೋದೀತೆಂದು ನಾವು ಆಕೆಗೆ ಸಲಹೆಯನ್ನಿತ್ತೆವು— ನಡುವಿನ ಸೊಸೆಯೆ, ಒಂದೆರಡು ವರ್ಷ ದುಡಿದು ಬಾಕಿ ಹಣ ತೀರಿಸು. ಅದರಿಂದ ನಿನ್ನ ಮಗನಿಗೆ ಇರಲಿಕ್ಕೆ ಸ್ವಲ್ಪ ಸ್ಥಳವಾದರೂ ಉಳಿದೀತು" ಎಂದಳು.

ಲಕ್ಷ್ಮಿಯು ತನ್ನ ಕಳೆಗುಂದಿದ ಮುಖವನ್ನು ಮೇಲಕ್ಕೆತ್ತಿಕೊಂಡು ಎದುರಿಗೆ ಎವೆಯಿಕ್ಕದೆ ನೋಡುತ್ತ ಕುಳಿತಳು. ಅತ್ತೆಯು ತನ್ನ ಸ್ವರವನ್ನು ಸ್ವಲ್ಪ ತಗ್ಗಿಸಿ "ಆದಾಗ್ಯೂ ನಾನು ಆಕೆಯೊಬ್ಬಳನ್ನೇ ಕರೆದು— ಕಮಲಾ, ಆಗುವುದೆಲ್ಲ ಆಗಿಹೋಯಿತು. ಅಲ್ಲಿ ಇಲ್ಲಿ ಕೈಗಡ

ಇಸಕೊಂಡು ಕಾಶಿಯವರೆಗೆ ಹೋಗಿ ಹಿರಿಯ ಸೊಸೆಯ ಕಾಲಿಗೆರಗು! ಹುಡುಗನನ್ನು ಆಕೆಯ ಪಾದಕ್ಕೆ ಹಾಕಿ 'ಜೀಜೀ, ಇವನ ದೋಷವೇನೂ ಇಲ್ಲ, ಇವನನ್ನು ಬದುಕಿಸು' ಎಂದು ಹೇಳಿಕೊ ಎಂದು ಹೇಳಿದೆ" ಎಂದಳು.

ಮಾತನಾಡುತ್ತಾಡುತ್ತ ಅತ್ತೆಯ ಕಣ್ಣುಗಳಿಂದ ಕಂಬನಿಗಳು ಬಂದುವು. ಅವನ್ನು ಒರೆಯಿಸಿಕೊಳ್ಳುತ್ತ "ಆದರೆ ಕೈದಿಯಂತೆ ತಲೆಯನ್ನು ತಗ್ಗಿಸಿಕೊಂಡು ಸುಮ್ಮಗೇ ಕುಳಿತಿದ್ದಳು. ಆಕೆಯು 'ಹೂ' ಎನ್ನಲಿಲ್ಲ, 'ಇಲ್ಲ' ಎನ್ನಲಿಲ್ಲ" ಎಂದಳು.

ಇವರ ಸರ್ವ ಅಪರಾಧ ತನ್ನ ತಲೆಯ ಮೇಲೆಯೆ ಬಂದು ಬಿದ್ದಿತೆಂದು ರಾಜಲಕ್ಷ್ಮಿಯು ತಿಳಿದುಕೊಂಡಳು ಆಕೆಯು ಉಣ್ಣುತ್ತಿದ್ದ ಆಹಾರದ ಅಗಳು ಕೂಡ ವಿಷವಾಯಿತು ಆಕೆಗೆ ಒಂದು ತುತ್ತು ಅನ್ನವೂ ಹೋಗದಾಯಿತು ಅತ್ತೆಯು ಯಾವುದೊ ಒಂದು ಕಾರ್ಯಕ್ಕಾಗಿ ಸ್ವಲ್ಪ ಹೊರಗೆ ಹೋಗಿದ್ದಳು. ಆಕೆಯು ಹಿಂತಿರುಗಿ ಬಂದು ಲಕ್ಷ್ಮಿಯ ದೆಶೆಯನ್ನು ನೋಡಿದಳು. ಆಕೆಯ ಸ್ವೈಮೇಲೆ ಎಚ್ಚರವೇ ಇಲ್ಲದಂತಾಯಿತು. ಗಟ್ಟಿಯಾಗಿ ಕೂಗತೊಡಗಿದಳು "ವಿಪಿನನ ಹೆಂಡತಿಯೇ! ಏ ಕಮುಲೀ!"

ವಿಪಿನನ ಹೆಂಡತಿಯು ಬಂದು ಬಾಗಿಲಬಳಿ ನಿಲ್ಲುತ್ತಲೇ ಅತ್ತೆಯು ಕಿಡಿಕಿಡಿಯಾದಳು. ಒಂದು ಕ್ಷಣದ ಹಿಂದೆ ಆಕೆಯ ಕಣ್ಣುಗಳಲ್ಲಿ ಕರುಣೆಯ ಕಂಬನಿಗಳಿದ್ದುವು. ಈಗ ಅವೆಲ್ಲಿಗೆ ಹೋದುವೊ! ಕಠೋರ ದನಿಯಿಂದ "ಇಷ್ಟು ಪರವೆಯಿಲ್ಲದೆ ಕೆಲಸ ಮಾಡಿದರೆ ಹೇಗೆ ನಡೆದೀತು ವಿಪಿನನ ಹೆಂಡತಿಯೆ! ಸೊಸೆಯರಸಿ ಒಂದು ತುತ್ತನ್ನೂ ಬಾಯಲ್ಲಿ ಇಡಲಿಲ್ಲ. ಎಷ್ಟು ಕೆಟ್ಟ ಅಡುಗೆ ಮಾಡಿರುವೆ!" ಎಂದಳು.

ಈ ತಿರಸ್ಕಾರದ ನುಡಿಗಳಿಗೆ ಬಾಗಿಲಬಳಿಯಿಂದ ಉತ್ತರವು ಬರಲಿಲ್ಲ. ಆದರೆ ಬೇರೆಯವರಿಗಾದ ಅವಮಾನದ ಭಾರದಿಂದ ರಾಜಲಕ್ಷ್ಮಿಯು ನಾಚಿಕೆಯಿಂದ, ವೇದನೆಯಿಂದ ತನ್ನ ತಲೆಯನ್ನು ಬಾಗಿಸಿದಳು.

ಅತ್ತೆಯು ಮತ್ತೆ ಎಂದಳು "ನೌಕರಿಯನ್ನು ಮಾಡುತ್ತಿರುವೆ, ಸಾಮಾನುಗಳನ್ನು ಕೆಡಿಸಿದರೆ ನಡೆಯುವುದೇನು ಮಗಳೇ! ಉಳಿದ ಐವರು ಹೆಂಗುಸರಂತೆಯೇ ನೀನೂ ಮಾಡಬೇಕು. ಈಗಲೇ ಹೇಳಿರುತ್ತೇನೆ ನೋಡು."

ವಿಪಿನನ ಹೆಂಡತಿಯು ಈಗ ಮೆಲ್ಲಗೆ ನುಡಿದಳು "ನಾನು ಮನಃಪೂರ್ವಕವಾಗಿ ಕಾರ್ಯವನ್ನು ಮಾಡುವೆ ಅತ್ತೆಮ್ಮ. ಆದರೆ ಇಂದೇನು ಆಯಿತೊ." ಇಷ್ಟೆಂದು ಆಕೆಯು ಕೆಳಗೆ ಹೋಗುತ್ತಲೇ ಲಕ್ಷ್ಮಿಯು ಎದ್ದು ನಿಂತಳು. ಆಗ ಅತ್ತೆಯು "ಅಯ್ಯೋ" ಎನ್ನತೊಡಗಿದಳು. ಲಕ್ಷ್ಮಿಯು ಮೆತ್ತಗೆ ನುಡಿದಳು "ಅದೇಕೆ ಶೋಕಿಸುತ್ತೀ ಅತ್ತೆಮ್ಮ? ನನ್ನ ಪ್ರಕೃತಿ ಚೆನ್ನಾಗಿಲ್ಲ, ಆದ್ದರಿಂದ ನಾನು ಉಣ್ಣಲಿಲ್ಲ. ನಡುವಿನ ಸೊಸೆಯ ಅಡುಗೆಯಲ್ಲಿ ಯಾವ ದೋಷವೂ ಇಲ್ಲ."

ಕೈ-ಮೊಗ ತೊಳೆದುಕೊಂಡು ತನ್ನ ಕೋಣೆಗೆ ಹೋದಳು ಲಕ್ಷ್ಮಿ. ಆಕೆಗೆ ಹೇಳತೀರದಷ್ಟು ವ್ಯಥೆಯಾಗತೊಡಗಿದ್ದಿತು. ಎಲ್ಲ ಬಗೆಯ ಅಪಮಾನವನ್ನು ಸಹಿಸುತ್ತ ವಿಪಿನನ ಹೆಂಡತಿಯು ಈ ಮನೆಯಲ್ಲಿ ನೌಕರಿಯನ್ನು ಮಾಡಬಹುದು, ಆದರೆ ಈ ದಿನದ ಬಳಿಕ ಗೃಹಿಣಿತ್ವದ ವ್ಯರ್ಥ ಶ್ರಮ ಹೊತ್ತುಕೊಂಡು ಲಕ್ಷ್ಮಿಯು ಹೇಗೆ ಈ ಮನೆಯಲ್ಲಿ ನಿರ್ವಹಿಸಬಲ್ಲಳು? ನಡುವಿನ ಸೊಸೆಗೆ ಸಮಾಧಾನ ಹೊಂದಲು ಒಂದು ಮಾರ್ಗವಾದರೂ ಉಂಟು— ತಪ್ಪಿಲ್ಲದಿದ್ದರೂ ದುಃಖಾನುಭವದ ಸಾಂತ್ವನೆಯ ಮಾರ್ಗ. ಆದರೆ ಸ್ವತಃ ಲಕ್ಷ್ಮಿಗೆ ಸಮಾಧಾನದ ಮಾರ್ಗವೆಲ್ಲಿದೆ?

ರಾತ್ರಿ ಆಕೆಯು ತನ್ನ ಪತಿಯೊಡನೆ ಏನನ್ನು ಮಾತಾಡಬಲ್ಲಳು? ಪತಿಯ ಮುಖವನ್ನು ನೋಡುವುದೂ ಆಕೆಯಿಂದಾಗಲಿಲ್ಲ. ಯಾವನ ಒಂದು ಮಾತಿನಿಂದ ವಿಪಿನನ ಹೆಂಡತಿಯ ಸರ್ವ ದುಃಖವು ದೂರಾಗಲು ಸಾಧ್ಯವಿದೆಯೊ ಅವನು ಆ ಅಬಲೆಯ ಕೂಡ ಸೇಡು ತೀರಿಸಿಕೊಳ್ಳುವುದರಲ್ಲಿ ಗಂಡಸುತನವಿದೆಯೆಂದು ಬಗೆಯುವನು. ಇಂಥವನಲ್ಲಿ ಭಿಕ್ಷೆ

ಬೇಡುವುದು ಹೀನತೆಯೆಂದು ಆಕೆಯು ಬಗೆದಳು. ಆದ್ದರಿಂದ ಲಕ್ಷ್ಮಿಗೆ ತನ್ನ ಪತಿಯೊಡನೆ ಮಾತನಾಡುವ ಪ್ರವೃತ್ತಿಯು ಉಂಟಾಗಲಿಲ್ಲ.

ಶಿವಚರಣ ನಕ್ಕು "ನಡುವಿನ ಸೊಸೆಯ ಕೂಡ ಭೇಟಿಯಾಯಿತೇನು? ಅಡುಗೆ ಹೇಗೆ ಮಾಡುವಳು ಹೇಳು?" ಎಂದು ಕೇಳಿದ.

ರಾಜಲಕ್ಷ್ಮಿಯು ಉತ್ತರವೀಯದಾದಳು. ಆಕೆಯು ಯೋಚಿಸತೊಡಗಿದಳು— 'ಇವರೇ ತನ್ನ ಗಂಡ, ಜೀವಿಸಿರುವ ವರೆಗೂ ಇವರೊಡನೆ ಇದ್ದುಕೊಂಡು ಬಾಳುವೆ ಮಾಡಬೇಕಾಗುವುದೆ!' ಹೀಗೆ ಯೋಚಿಸುತ್ತಿರುವಾಗ ಆಕೆಯ ಮನವು ಎನ್ನತೊಡಗಿತು "ಭೂಮೀ ತಾಯೀ, ಬಾಯ ತೆರೆ!"

ಮರುದಿನ ಬೆಳಿಗ್ಗೆ ಏಳುತ್ತಲೇ ಲಕ್ಷ್ಮಿಯು ದಾಸಿಯ ಮುಖಾಂತರ ಅತ್ತೆಯನ್ನು ಕರೆಕಳುಹಿದಳು. ಆಕೆಗೆ ಜ್ವರ ಬಂದಿದ್ದುವು. ಈ ದಿನ ತಾನು ಉಣ್ಣುವುದಿಲ್ಲ ಎಂದು ಆಕೆಗೆ ಹೇಳಬೇಕಾಗಿತ್ತು.

ಅತ್ತೆಯು ಆಕೆಯ ಕೋಣೆಗೆ ಬಂದು ಅತ್ಯಂತ ಅನುನಯ—ವಿನಯದಿಂದ ಲಕ್ಷ್ಮಿಯನ್ನು ಕಾಡಿದಳು. ಆಕೆಯ ಮುಖವನ್ನು ನೋಡಿ ಮತ್ತು ದನಿಯನ್ನು ಆಲಿಸಿ ಅತ್ತೆಯು ಸೊಸೆಯರಸಿಯು ಏನನ್ನೋ ಬಚ್ಚಿಡಲು ಯತ್ನಿಸುತ್ತಿರುವಳೆಂಬುದನ್ನು ಅರಿತಳು. ಬಳಿಕ ಆಕೆಯೆಂದಳು "ಸೊಸೆಯರಸೀ, ನಿನಗೆ ನಿಜವಾಗಿಯೂ ಜ್ವರ ಬಂದಿಲ್ಲ."

ಲಕ್ಷ್ಮಿಯು ತಲೆಯಲ್ಲಾಡಿಸಿ ಗಟ್ಟಿಯಾಗಿ "ನನಗೆ ಜ್ವರ ಬಂದಿವೆ. ನಾನು ಏನನ್ನೂ ಉಣ್ಣುವುದಿಲ್ಲ" ಎಂದಳು.

ಡಾಕ್ಟರರು ಬಂದರು. ಅವರನ್ನು ಕಂಡೊಡನೆಯೆ "ನನಗೆ ನಿಮ್ಮ ಔಷಧಿಯಿಂದ ಯಾವ ಗುಣವೂ ಆಗುವುದಿಲ್ಲವೆಂಬುದು ತನುಗೆ ಗೊತ್ತುಂಟು— ತಾವು ಹೋಗಿರಿ" ಎಂದು ಕೋಣೆಯ ಹೊರಗಿಂದ ಹೊರಗೇ ಅವರನ್ನು ಕಳಿಸಿ ಬಿಟ್ಟಳು.

ಶಿವಚರಣ ಬಂದು ಬಹಳ ವಿಚಾರ ಮಾಡಿದ. ಆದರೆ ಅವನ ಮಾತಿಗೂ ಉತ್ತರವು ದೊರೆಯಲಿಲ್ಲ.

ಇದೇ ರೀತಿಯಾಗಿ ಇನ್ನೂ ಮೂರು-ನಾಲ್ಕು ದಿನಗಳು ಕಳೆದುವು. ಆಗ ಮನೆಯವರೆಲ್ಲರೂ ಯಾವುದೊ ಒಂದು ಅಜ್ಞಾತ ಸಂಶಯದಿಂದ ಉದ್ವಿಗ್ನರಾದರು.

ಒಂದು ದಿನ ಮಧ್ಯಾಹ್ನ ರಾಜಲಕ್ಷ್ಮಿಯು ಬಚ್ಚಲುಮನೆಯಿಂದ ಹೊರಬಿದ್ದು ಅಂಗಳದ ಒಂದು ಮೂಲೆಯಿಂದ ಮೇಲಕ್ಕೆ ಹೋಗುತ್ತಿದ್ದಳು. ಅತ್ತೆಯು ಅಡುಗೆಮನೆಯ ಹೊರಭಾಗದಿಂದ ಆಕೆಯನ್ನು ನೋಡಿ ಕೂಗಿದಳು "ನೋಡು ಸೊಸೆಯರಸಿ, ವಿಪಿನನ ಹೆಂಡತಿಯ ಈ ಕೆಲಸವನ್ನು ನೋಡು! ನಡುವಿನ ಸೊಸೆಯು ಕೊನೆಗೆ ಕದಿಯುವುದಕ್ಕೆ ಸಿದ್ಧಳಾದಳೇ?"

ರಾಜಲಕ್ಷ್ಮಿಯು ಹತ್ತಿರ ಹೋಗಿ ನಿಂತಳು. ನಡುವಿನ ಸೊಸೆಯು ಸುಮ್ಮಗೆ ಮುಖವನ್ನು ಕೆಳಗೆ ಮಾಡಿಕೊಂಡು ಕುಳಿತಿದ್ದಳು, ಒಂದು ಪಾತ್ರೆಯಲ್ಲಿ ಸ್ವಲ್ಪ ಅನ್ನವಿದ್ದಿತು, ಮತ್ತು ಅದರ ಮೇಲೆ ಒಂದು ತುಣುಕು ಬಟ್ಟೆಯನ್ನು ಹೊದಿಸಲಾಗಿದ್ದಿತು. ಅತ್ತೆಯು ಅದನ್ನು ತೋರಿಸುತ್ತ "ನೀನೇ ಹೇಳು ಸೊಸೆಯರಸೀ, ಇಷ್ಟು ಅನ್ನ, ಮತ್ತು ಇಷ್ಟು ಕಾಯಿಪಲ್ಯ ಒಬ್ಬ ಮನುಷ್ಯನು ಉಣಬಲ್ಲನೆ? ಮನೆಗೆ ತೆಗೆದು ಕೊಂಡು ಹೋಗುತ್ತಿರುವಳು ಮಗನಿಗಾಗಿ! ನಾನು ಈಕೆಗೆ ಆಗಾಗ್ಗೆ ಹೀಗೆ ಒಯ್ಯಬೇಡವೆಂದು ಹೇಳಿದ್ದೇನೆ. ಇದು ಶಿವಚರಣನ ಕಿವಿಗೆ ಬಿದ್ದರೆ ಒಳಿತಾಗದು. ಕುತ್ತಿಗೆ ಹಿಡಿದು ಹೊರಗೆ ತಳ್ಳಿಬಿಡುವ. ಸೊಸೆಯರಸೀ, ನೀನೇ ಈ ಮನೆಗೆ ಒಡೆಯಳು ನೀನೇ ಇದರ ನ್ಯಾಯ ವಿಚಾರಣೆ ಮಾಡು" ಎಂದು ನುಡಿದು ತನ್ನ ಕರ್ತವ್ಯವನ್ನು ತಾನು ಮಾಡಿದಂತಾಯಿತೆಂದು ತಿಳಿದುಕೊಂಡು ಉಸಿರ್ಗರೆದಳು.

ಅತ್ತೆಯ ಚೀತ್ಕಾರವನ್ನು ಕೇಳಿ ಮನೆಯ ಆಳುಮಕ್ಕಳು, ದಾಸಿಯರು, ಇತರ ಜನರು ಬಂದು ನೆರೆದರು ಮತ್ತು ತಮಾಷೆಯನ್ನು ನೋಡತೊಡಗಿದರು. ಅವರೆಲ್ಲರ ಮಧ್ಯದಲ್ಲಿ ಕುಳಿತಿದ್ದರು ಆ ಮನೆಯ ನಡುವಿನ ಸೊಸೆ ಮತ್ತು ಈ ಮನೆಯ ರಾಣಿ.

ಇಷ್ಟು ಚಿಕ್ಕ ಮತ್ತು ತುಚ್ಛ ವಸ್ತುವಿನ ಸಲುವಾಗಿ ಇಷ್ಟು ದೊಡ್ಡ ಹೇಸಿ ಕಾಂಡವು ಉದ್ಭವಿಸೀತೆಂಬುದರ ಕಲ್ಪನೆಯು ರಾಜಲಕ್ಷ್ಮಿಗೆ ಇನಿತೂ ಇರಲಿಲ್ಲ. ಈ ಅಪರಾಧಕ್ಕಾಗಿ ಏನೆಂದು ಆಕೆಯು ಉತ್ತರ ವೀಯಬಲ್ಲಳು? ಸ್ವತಃ ಆಕೆಯು ಅಪಮಾನ, ಅಭಿಮಾನ ಮತ್ತು ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ಕುಳಿತಿದ್ದಳು. ಲಜ್ಜೆ ಯಾರಿಗೆ? ಸ್ವತಃ ತನಗಾಗಿ. ಆಕೆಯ ಕಣ್ಣುಗಳಿಂದ ಕಂಬನಿಗಳು ಬಳಬಳನೆ ಉದುರತೊಡಗಿದುವು. ಇವರೆಲ್ಲರ ಎದುರಿಗೆ ತಾನೇ ಕಳ್ಳಿ, ಬಂಧಿಸಲ್ಪಟ್ಟವಳು ಮತ್ತು ತನ್ನ ನ್ಯಾಯವಿಚಾರಣೆಯನ್ನು ನಡುವಿನ ಸೊಸೆ ಕಮಲೆಯು ಮಾಡುತ್ತಿರುವಳು ಎಂಬಂತೆ ಲಕ್ಷ್ಮಿಗೆ ಎನಿಸ ತೊಡಗಿತು.

ಎರಡುಮೂರು ನಿಮಿಷ ಹಾಗೆಯೆ ಇದ್ದು, ತನ್ನನ್ನು ಚೇತರಿಸಿ-ಕೊಂಡು ಲಕ್ಷ್ಮಿಯು ಗಟ್ಟಿಯಾಗಿ "ಅತ್ತಿಮ್ಮ, ನೀವೆಲ್ಲರೂ ಇಲ್ಲಿಂದ ಹೊರಟು ಹೋಗಿರಿ" ಎಂದಳು.

ಆಕೆಯು ಹೇಳಿದೊಡನೆ ಎಲ್ಲರೂ ಹೊರಟು ಹೋದರು. ಬಳಿಕ ರಾಜಲಕ್ಷ್ಮಿಯು ಮೆಲ್ಲಗೆ ಕಮಲೆಯ ಹತ್ತಿರ ಹೋಗಿ ಕುಳಿತಳು. ಬಳಿಕ ತನ್ನ ಕೈಯಿಂದ ಆಕೆಯ ಗದ್ದವನ್ನು ಹಿಡಿದು ಮೇಲಕ್ಕೆತ್ತಿ ನೋಡಿದಳು. ಕಮಲೆಯ ಕಣ್ಣುಗಳಿಂದಲೂ ಕಂಬನಿಗಳು ಉದುರುತ್ತಿದ್ದುವು. ರಾಜಲಕ್ಷ್ಮಿಯು "ಕಮಲಾ, ನಾನು ನಿನ್ನ ಜೀಜೀ—" ಎಂದು ತನ್ನ ಸೀರೆಯ ಸೆರಗಿನಿಂದ ಆಕೆಯ ಕಂಬನಿಗಳನ್ನು ಒರೆಸಿದಳು.

# ಸತ್ಯೇಂದ್ರನಾಥ

ಸಾಗರಪುರದಲ್ಲಿ ಈ ದಿನ ವಿಜೃಂಭಣೆ, ನಗಾರಿ ನೌಬತ್ತುಗಳ ವಾದ್ಯದಿಂದ ಈ ಊರಿನವರ ಕಿವಿಗಳು ಗಡಚಿಕ್ಕಿವೆ. ಒಂದು ವಾರದಿಂದ ಈ ಊರಲ್ಲಿ ಎಷ್ಟು ಚಟುವಟಿಕೆಯಿದೆಯೆಂಬುದನ್ನು ಸುತ್ತುಮುತ್ತಲಿನ ಐದಾರು ಹಳ್ಳಿಯವರನ್ನು ಕೇಳಿ ತಿಳಿದುಕೊಳ್ಳಿರಿ. ಈ ರಾಜಸೂಯ ಯಜ್ಞದಲ್ಲಿ ಇಷ್ಟು ವಾದ್ಯ ವೈಭವ, ನೌಬತ್ತುಗಾರರ ಇಂತಹ ಐಕ್ಯಭಾವ, ಕರಡಿ ಮಜಲಿನ ಪ್ರಚಂಡ ವಿಕ್ರಮವನ್ನು ಈ ಹಳ್ಳಿಯವರು ಈ ಮೊದಲು ಎಂದೂ ನೋಡಿರಲಿಲ್ಲ. ಈ ನಾನಾ ವಾದ್ಯಗಳ ಸಮೂಹ ವನ್ನು ಆಲಿಸಲು ಜನಸ್ತೋಮವು ನೆರೆದಿತ್ತು, ಆದರೆ ಈ ವಾದ್ಯಗಳಿಂದ ಅತ್ಯಂತ ದುಃಖವಾದುದು ಬಡವಾಯಿ ದನಕರುಗಳಿಗೆ— ಅದರಲ್ಲೂ ಹಸು ಮತ್ತು ಹಸುವಿನ ಕರುಗಳಿಗೆ. ಇಷ್ಟು ವಿಜೃಂಭಣೆಯಿದ್ದುದು ಒಬ್ಬ ಅಪ್ರಾಪ್ತ ವಯದ-- ಪದಿನಾಲ್ಕು ವರ್ಷದ ಹುಡುಗನ ಮದುವೆ ಗಾಗಿ! ಸಾಗರಪುರದ ಜಮೀನುದಾರರಾದ ಶ್ರೀಮಾನ್ ಹರದೇವ ಮೈತ್ರರ ಏಕಮಾತ್ರ ಪುತ್ರನ ವಿವಾಹದ ನಿಮಿತ್ತವಾಗಿ ಇಷ್ಟು ಆನಂದ ಕೋಲಾಹಲವು ನಡೆದುದು. ಅವರ ಮಗನ ಹೆಸರು ಶ್ರೀಯುತ ಸತ್ಯೇಂದ್ರಕುಮಾರ ಮೈತ್ರ. ಹರದೇವರು ದೊಡ್ಡ ಮನುಷ್ಯರು, ಸುಮಾರು ಇಪ್ಪತ್ತೈದು - ಇಪ್ಪತ್ತಾರು ಸಾವಿರ ರೂಪಾಯಿ ವಾರ್ಷಿಕ ಉತ್ಪನ್ನ ಅವರಿಗೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಮಗನ ಮದುವೆಯನ್ನು ಮಾಡಲಿಕ್ಕೆ ಒಂದು ಕಾರಣವುಂಟು. ಆ ಮಗುವಿನ ತಾಯಿಗೆ ತನ್ನ ಸೊಸೆಯ ಮುಖವನ್ನು ಆದಷ್ಟು ಬೇಗ ನೋಡಬೇಕೆಂಬ ಆಸೆಯಿದ್ದಿತು

ಅದನ್ನು ಪೂರ್ಣ ಮಾಡುವುದಕ್ಕಾಗಿ ಈ ವಿವಾಹ ಸಮಾರಂಭ ನಡೆಯಿತು.

ವರ್ಧಮಾನ ಜಿಲ್ಲೆಯಲ್ಲಿರುವ ದಿಲಜಾನಪುರದ ಜಮೀನುದಾರರಾದ ಶ್ರೀಮಾನ್ ಕಾಮಾಖ್ಯಾಚರಣ ಚೌಧರಿಯ ಕಿರಿಯ ಕನ್ಯೆ ಸರಳೆಯ ಕೂಡ ಸತ್ಯೇಂದ್ರನ ವಿವಾಹವಾಯಿತು.

ಸರಳೆಯ ಬಣ್ಣ ಕೆಂಪು, ಮುಖ ಮುದ್ದು. ಸತ್ಯೇಂದ್ರನಿಗೆ ಹಿಡಿಸಲಾರದಷ್ಟು ಸಂತೋಷ.

ಹತ್ತು ವರ್ಷದ ಸುಂದರ ಸೊಸೆಯ ಮೊಗವನ್ನು ನೋಡಿ ಸತ್ಯೇಂದ್ರನ ತಾಯಿಗೂ ಬಹಳ ಸಂತೋಷವಾಯಿತು. ಮದುವೆಯಾದ ಮರುವರ್ಷವೇ ಹರದೇವರು ಸೊಸೆಯನ್ನು ಆಕೆಯ ತವರುಮನೆಯಿಂದ ತಮ್ಮ ಮನೆಗೆ ಕರೆದುಕೊಂಡು ಬಂದರು. ಸೊಸೆಯನ್ನು ತವರು ಮನೆಯಲ್ಲಿ ಬಿಡಬಾರದೆಂದು ಅವರ ಹೆಂಡತಿಯ ಬಯಕೆ. ಆಕೆಯು ಆಗಾಗ್ಗೆ ಹೇಳುತ್ತಿದ್ದಳು— ವಿವಾಹವಾದ ಬಳಿಕ ಹುಡುಗಿಯನ್ನು ತವರು ಮನೆಯಲ್ಲಿ ಇಡಬಾರದು. ಆಕೆಯ ಅಭಿಪ್ರಾಯವು ಕೆಟ್ಟದಿರಲಿಲ್ಲ!

ಸತ್ಯೇಂದ್ರ ಕಲಕತ್ತೆಯಲ್ಲಿ ಹೈಸ್ಕೂಲಿನಲ್ಲಿ ಓದುತ್ತಿರುವ. ಅವನ ಸಲುವಾಗಿ ಹರದೇವರು ತಮ್ಮ ಶ್ರೀಮತಿಯೊಡನೆ ಕಲಕತ್ತೆಯಲ್ಲಿಯೆ ಇರುವರು. ಆದುದರಿಂದ ಸರಳೆಯೂ ಅಲ್ಲಿಗೇ ಬಂದಳು. ಚಿಕ್ಕ ವಯಸ್ಸಿನಲ್ಲಿ ಮದುವೆ ಆಗಿತ್ತು, ಆದುದರಿಂದ ಸರಳೆಯು ಹರದೇವರ ಕೂಡ ಮಾತನಾಡುತ್ತಿದ್ದಳು, ಸತ್ಯೇಂದ್ರನಿರುವಾಗಲೂ ಅವನ ಎದುರಿಗೇ ಅತ್ತೆಯೊಡನೆ ಮಾತನಾಡುತ್ತಿದ್ದಳು. ಇದರಿಂದ ಅತ್ತೆಗೆ ಆನಂದವಾಗುತ್ತಿದ್ದಿತು, ದುಃಖವಾಗುತ್ತಿರಲಿಲ್ಲ.

ಸ್ವಲ್ಪ ದಿನಗಳ ನಂತರ ಕಾಮಾಖ್ಯ ಬಾಬುಗಳು ಸರಳೆಯನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಒಂದೆರಡು ತಿಂಗಳಾದ ಬಳಿಕ ಸತ್ಯೇಂದ್ರ ಕೋಪದಿಂದ “ಪುಸ್ತಕಗಳ ಮೇಲೆ ಧೂಳು ಕೂತಿದೆ, ದೌತಿಯಲ್ಲಿ ಮಸಿ ಒಣಗಿ ಹೋಗಿವೆ. ಇದನ್ನೆಲ್ಲ ನೋಡಿಕೊಳ್ಳುವವರು ಯಾರೂ ಇಲ್ಲ!” ಎಂದ.

ಈ ಮಾತಿನ ಅರ್ಥವು ಅವನ ತಾಯಿಗಾಯಿತು ಮತ್ತು ಇದು ಹರದೇವ ಬಾಬುಗಳ ಕಿವಿಯ ವರೆಗೂ ಹೋಯಿತು. ಅವರು ನಕ್ಕು ಸೊಸೆಯನ್ನು ಕರೆದುಕೊಂಡು ಬರಲು ಮನುಷ್ಯನನ್ನು ಕಳುಹಿದರು. ಅವರು ಬರೆದರು "ಇಲ್ಲಿ ಮನೆಯೊಳಗೆ ಉಪದ್ರವವೆದ್ದಿದೆ. ಸೊಸೆಯು ಬಾರದ ವಿನಾ ಅದು ನಿಲ್ಲುವಂತಿಲ್ಲ! ಆದುದರಿಂದ ಸೊಸೆಯನ್ನು ಕಳಿಸಿಕೊಡಿರಿ."

ಪುನಃ ಸರಳೆಯು ಬಂದಳು. ಸತ್ಯೇಂದ್ರನ ಚಿಕ್ಕ ಚಿಕ್ಕ ಕೆಲಸಗಳನ್ನು ಮಾಡುತ್ತಿದ್ದಳು. ಪುಸ್ತಕಗಳನ್ನು ಒರಸಿ ಸ್ವಚ್ಛವಾಗಿಡುವುದು, ಕಾಲೇಜದ ವೇಷವನ್ನು ಸಿದ್ಧಗೊಳಿಸುವುದು— ಎಂದರೆ ಶರ್ಟಿನ ಕಪ್ಪುಗಳಲ್ಲಿ ಬೇರೆ ಬೇರೆ ಬಣ್ಣದ ಗುಂಡಿಗಳು ಇರದಂತೆ ನೋಡಿಕೊಳ್ಳುವುದು, ಸರಿಯಾದ ವೇಳೆಗೆ ಊಟಕ್ಕೆ ಹಾಕುವುದು, ಕಾಲೇಜಿನ ವೇಳೆಗೆ ಸರಿಯಾಗಿ ಮನೆಯಿಂದ ಕಾಲೇಜಿಗೆ ಹೊರಡಿಸುವುದು, ತಡವಾದಾಗ ಮೆಟ್ಟುಗಳಲ್ಲಿ ಒಂದು ಕಾಲಲ್ಲಿ ಕಾರ್ಪೆಟಿನ ಮೆಟ್ಟು, ಇನ್ನೊಂದರಲ್ಲಿ ವಾರ್ನಿಶಾದ ಮೆಟ್ಟು ಹಾಕದಂತೆ ನೋಡಿಕೊಳ್ಳುವುದು, ರಾಜರ ಮನೆಗೆ ಹೋಗುವಾಗ ಧರಿಸುವ ಸೆಲ್ಲೆಯು ಕೋಟಿನ ಮೇಲೆ ಬೀಳದಂತೆ ಎಚ್ಚರಿಕೆ ತೆಗೆದುಕೊಳ್ಳುವುದು ಇವೇ ಮುಂತಾದ ಕಾರ್ಯಗಳನ್ನು ಸರಳೆಯು ಮಾಡುತ್ತಿದ್ದಳು. ಸರಳೆಯು ಇಲ್ಲದಿರುವಾಗ ವೇಷದಲ್ಲಿ ವ್ಯತ್ಯಾಸವಾಗುತ್ತಿತ್ತು. ಸತ್ಯೇಂದ್ರನಂಥ ಅನ್ಯ ಮನಸ್ಕ ಮನುಷ್ಯನನ್ನು ಯಾರೂ ನೋಡಿರಲಿಕ್ಕಿಲ್ಲ! ಸರಳೆಯ ವಿನಾ ಯಾರಿಗೂ ಈ ಕೆಲಸ ಮಾಡುವುದು ಸಾಧ್ಯವಿರಲಿಲ್ಲ. ಯಾರಾದರೂ ಮಾಡಿದರೆ ಅದು ಸತ್ಯೇಂದ್ರನ ಮನಸ್ಸಿಗೆ ಬರುತ್ತಿರಲಿಲ್ಲ. ಆದುದರಿಂದ ಸರಳೆಯೇ ಈ ಕೆಲಸವನ್ನು ಮಾಡುತ್ತಿದ್ದಳು.

೨

ಸುಶೀಲೆಯು ಸರಳೆಯ ಹಿರಿಯ ನಾದಿನಿ. ಆಕೆಯ ಮಗನ ಅನ್ನಪ್ರಾಶನ ಸಂಸ್ಕಾರವಾಗುವುದಿದ್ದಿತು. ಕಾಮಾಖ್ಯ ಬಾಬುಗಳು

ತಮ್ಮ ಮೊಮ್ಮಗನ ಅನ್ನಪ್ರಾಶನದ ಕಾಲಕ್ಕೆ ಸರಳೆಯನ್ನು ಕರೆದು ಕೊಂಡು ಹೋಗುವುದಕ್ಕಾಗಿ ಕಲಕತ್ತೆಗೆ ಬಂದರು.

ಸರಳೆಯ ನಾದಿನಿಯು ಸರಳೆಗೂ ಮತ್ತು ಸತ್ಯೇಂದ್ರನಿಗೂ ಅನ್ನ-ಪ್ರಾಶನದ ಸಂಸ್ಕಾರ ಸಮಾರಂಭಕ್ಕೆ ಬರಬೇಕೆಂದು ಹೆಚ್ಚು ಆಗ್ರಹ ಮಾಡಿ ಒಂದು ಪತ್ರವನ್ನು ಬರೆದಿರುವಳು. ಈಗ ಸುಮಾರು ಮೂರು ವರ್ಷಗಳಿಂದ ಸರಳೆಯು ದಿಲಜಾನಪುರಕ್ಕೆ ಹೋಗಿಲ್ಲ. ಸತ್ಯೇಂದ್ರನೂ ಹೊರಡಲು ಸಿದ್ಧನಾದ. ಕಾಮಾಖ್ಯಾ ಬಾಬುಗಳು ಅತ್ಯಂತ ಆನಂದ ದಿಂದ ಮಗಳನ್ನೂ ಅಳಿಯನನ್ನೂ ಕರೆದುಕೊಂಡು ತಮ್ಮೂರಿಗೆ ಬಂದರು.

ಬಹಳ ದಿನಗಳ ನಂತರ ಮಗಳನ್ನೂ ಅಳಿಯನನ್ನೂ ನೋಡಿ ತಾಯಿಗೆ ಅತ್ಯಂತ ಆನಂದವಾಯಿತು. ಯಾರ ಮಗನ ಅನ್ನಪ್ರಾಶನ ವಾಗುವದಿದ್ದಿತೊ ಆಕೆಯು ಬಂದು ಅನೇಕ ಮಾತುಗಳನ್ನು ಹೇಳಿ ಅನೇಕ ರೀತಿಯಲ್ಲಿ ಅವರನ್ನು ಸಂತೋಷಪಡಿಸಿದಳು.

ಶುಭಕಾರ್ಯವು ನಿರ್ವಿಘ್ನವಾಗಿ ಸಾಗಿದಬಳಿಕ ಸತ್ಯೇಂದ್ರ ತಿರುಗಿ ಮನೆಗೆ ಹೋಗಲು ಬಯಸಿದ; ಆದರೆ ಅತ್ತೆಯು ಬಹಳ ಆಗ್ರಹದಿಂದ "ಇಷ್ಟು ದಿವಸಗಳ ನಂತರ ಬಂದಿರುವಿರಿ, ಇನ್ನಿಷ್ಟು ದಿವಸ ಇದ್ದು ಹೋಗಿರಿ" ಎಂದಳು.

ಸರಳೆಯೂ ಬಿಡಲಿಲ್ಲ, ಆದುದರಿಂದ ಸತ್ಯೇಂದ್ರ ಇನ್ನೂ ಮೂರು ನಾಲ್ಕು ದಿನ ಅತ್ತೆಯ ಮನೆಯಲ್ಲೇ ಉಳಿಯಬೇಕಾಯಿತು. ಆದಾಗ್ಯೂ ಸರಳೆಯು ಗಂಡನಿಗೆ ಮನೆಗೆ ಹೊರಡಲು ಬಿಡಲಿಲ್ಲ! ಆದರೆ ಹೋಗದೆ ಇರುವಂತೆಯೂ ಇರಲಿಲ್ಲ. ಹೀಗೆಯೆ ಇಲ್ಲಿದ್ದರೆ ಓದು-ಬರೆಹಕ್ಕೆ ಹಾನಿ ತಟ್ಟುವುದು, ಪರೀಕ್ಷೆಗೂ ಬಹಳ ದಿನಗಳು ಉಳಿಯಲಿಲ್ಲ. ಹೊರಡುವಾಗ ಸರಳೆಯು ಕೇಳಿದಳು "ನನ್ನನ್ನು ಪುನಃ ಎಂದು ಕರೆದು ಕೊಂಡು ಹೋಗುವಿರಿ?"

"ನೀನು ಬರಲು ಬಯಸಿದಾಗ."

" ಹತ್ತು ಹನ್ನೆರಡು ದಿನಗಳ ನಂತರವೇ ಬಂದು ಕರೆದುಕೊಂಡು ಹೋಗಿರಿ. "

ಸತ್ಯೇಂದ್ರ ಅತ್ಯಂತ ಸಂತುಷ್ಟನಾದ. ಅವನು ಇಷ್ಟು ಬೇಗ ಕರೆದುಕೊಂಡು ಹೋಗಿರಿ ಎಂದು ತನ್ನ ಹೆಂಡತಿಯು ಹೇಳಬಹುದೆಂದು ಬಗೆದಿರಲಿಲ್ಲ !

ಬಳಿಕ ಸರಳೆಯು ಕಣ್ಣುಗಳಲ್ಲಿ ಕಂಬನಿಗಳನ್ನು ತಂದು ಪತಿಯನ್ನು ಬೀಳ್ಕೊಡುತ್ತ ''ನನ್ನ ಬಗ್ಗೆ ಹೆಚ್ಚು ಚಿಂತಿಸಬೇಡಿರಿ ಮತ್ತೆ— ರಾತ್ರಿಯಲ್ಲಿ ಓದಿ ಓದಿ ಕಾಯಿಲೆ ಬೀಳಬೇಡಿರಿ '' ಎಂದಳು.

ತನ್ನ ಆಣೆಯಿಟ್ಟು ರಾತ್ರಿಯಲ್ಲಿ ಹತ್ತು ಗಂಟೆಯ ಮೇಲೆ ಓದಬಾರದೆಂದು ಹೇಳಿದಳು. ಅದೆಷ್ಟು ಬರಿದಾದ ಹೃದಯದಿಂದ ಮತ್ತು ಉದಾಸೀನ ಮನವುಳ್ಳವನಾಗಿ ಸತ್ಯೇಂದ್ರ ಮನೆಗೆ ಹೋದನೊ.

ಸತ್ಯೇಂದ್ರ ಒಂದು ಪುಸ್ತಕವನ್ನು ತೆರೆದು ಕುಳಿತಿದ್ದ. ಪುಸ್ತಕದ ಪುಟಗಳೊಡನೆ ಮನಸ್ಸಿನ ದ್ವಂದ್ವ ಯುದ್ಧವು ಸಾಗಿದ್ದಿತು.

ಸತ್ಯೇಂದ್ರ ಎಣಿಸಿ ನೋಡಿದ—ಇಡಿ ದಿನ ಅವನು ಕೇವಲ ೨೬ ಸಾಲುಗಳನ್ನು ಮಾತ್ರ ಓದಿದ್ದ ! ಅವನು ದುಃಖಿತನಾಗಿ ತಾನು ಹೀಗೆ ಓದಿದರೆ ಪಾಸಾದಂತೆಯೆ ಸರಿ ಎಂದು ಯೋಚಿಸಿದ ! ಕ್ರಮೇಣವಾಗಿ ಆ ಸಾಮಾನ್ಯ ದುಃಖವು ಸಿಟ್ಟಿನ ರೂಪ ತಾಳಿತು. ' ಇದೆಲ್ಲವೂ ಆ ದುಷ್ಟ ಸರಳೆಯ ದೋಷ. ಇಲ್ಲಿಗೆ ಬಂದು ಐದು ದಿನಗಳಾಗಿ ಹೋದುವು, ಐದು ಪುಟಗಳನ್ನು ಕೂಡ ಓದಿಲ್ಲ. ಇದಕ್ಕೂ ಮೊದಲು ಹತ್ತು ಗಂಟೆಯ ನಂತರ ಓದುಗೊಡುತ್ತಿರಲಿಲ್ಲ, ದೀಪವನ್ನು ಆರಿಸಿ ಬಿಡುತ್ತಿದ್ದಳು; ಆದುದರಿಂದ ಆಕೆಯನ್ನು ತವರುಮನೆಗೆ ಕಳಿಸಿ ಅಭ್ಯಾಸ ಮಾಡಬೇಕೆಂದು ಯೋಚಿಸುತ್ತಿದ್ದೆ. ಆದರೆ ಈಗ ಆದುದೇನು ? ಸರಿಯಾಗಿ ತಿರುವು ಮುರುವು ! ನಾಳೆಯೆ ಹೋಗಿ ಆಕೆಯನ್ನು ಕರೆದುಕೊಂಡು ಬರುವೆ. ನಾನು ಹೋಗುವುದೆಂದರೆ ನಾಚಿಕೆಯ ಮಾತು ! ಆದರೇನು ? ನಾಪಾಸ ಆಗಬೇಕೇನು ? ' ಎಂದು ಯೋಚಿಸಿದ.

ಏನೇ ಆಗಲಿ, ಸತ್ಯೇಂದ್ರನಾಥ ತನ್ನ ಹೆಂಡತಿಯನ್ನು ಕರೆದು ಕೊಂಡು ಬರುವುದಕ್ಕೆ ಒಂದು ಉಪಾಯವನ್ನು ಹುಡುಕತೊಡಗಿದ. ಮಾವನ ಮನೆಗೆ ಹೋಗಿ ಏನೆಂದು ಹೇಳಬೇಕು ? ಅವನಿಗೆ ನಾಚಿಕೆ. ಅವನಿಗೆ ಹೆಂಡತಿಯ ಮೇಲೆ ಇಷ್ಟು ಮಮತೆ ಅದು ಹೇಗೆ ಹುಟ್ಟಿತು ? ಎರಡು ದಿನ—

ಇಷ್ಟರಲ್ಲಿ ಆಳುಮಗನು ಬಂದು ತಂತಿಯನ್ನು ಕೊಟ್ಟ. ಸತ್ಯೇಂದ್ರ ನಿಗೆ ಅಚ್ಚರಿಯಾಯಿತು. ಇನ್ನು ಯೋಚಿಸಲು ವೇಳೆಯಿಲ್ಲ—ಎಲ್ಲಿಯ ತಾರು ? ಕವರನ್ನು ಒಡೆಯುತ್ತಲೆ ಅವನ ಹೃದಯ ನಡುಗಿತು. ಅದರ ಲ್ಲಿಯ ವಿಷಯವನ್ನು ಓದಿ ಅವನ ಕಣ್ಣು ಕತ್ತಲುಗೂಡಿಸಿದಂತಾದುವು. ಸರಳೆಗೆ ಕಾಯಿಲೆ.

ಅದೇ ದಿನ ಹರದೇವರು ಸತ್ಯೇಂದ್ರನನ್ನು ಕರೆದುಕೊಂಡು ದಿಲ-ಜಾನಪುರಕ್ಕೆ ಹೋದರು. ಮನೆಯ ಎದುರಿಗೇ ಕಾಮಾಖ್ಯ ಬಾಬು ಗಳೊಡನೆ ಭೇಟಿಯಾಯಿತು. ಹರದೇವರು ಕೇಳಿದರು "ಸೊಸೆಯ ಪ್ರಕೃತಿ ಹೇಗಿದೆ ?"

ಹರದೇವರು ಒಳಗೆ ಹೋಗಿ ನೋಡಿದರು. ಸರಳೆಗೆ ಕಾಲರಾ. ಒಂದೇ ದಿನದಲ್ಲಿ ಆಕೆಯು ತೀರ ಸೋತುಹೋಗಿರುವಳು, ಗುರುತೇ ಸಿಗುವಂತಿಲ್ಲ. ಕಣ್ಣುಗಳು ಒಳಸಿಕ್ಕಿವೆ. ಕಮಲದಂತಹ ಕಲೇವರ ಕಂದಿಹೋಗಿದೆ. ಅನುಭವಿಗಳಾದ ಹರದೇವರು ಸ್ಥಿತಿ ಚೆನ್ನಾಗಿಲ್ಲವೆಂದು ತಿಳಿದುಕೊಂಡರು. ಕಣ್ಣುಗಳನ್ನು ಒರಸಿಕೊಳ್ಳುತ್ತ "ಮಗೂ ಸರಳಾ !" ಎಂದರು.

ಸರಳೆಯು ಕಣ್ತೆರೆದು ನೋಡಿದಳು. ಆಗ ಸ್ವಲ್ಪ ಎಚ್ಚರ ಬಂದಿತ್ತು ಆಕೆಗೆ.

"ಪ್ರಕೃತಿ ಹೇಗಿದೆ ಮಗೂ ?"

ಸರಳೆಯು ನಕ್ಕು "ಚೆನ್ನಾಗಿರುವೆ" ಎಂದಳು.

ಪರಸ್ಪರರಲ್ಲಿ ಒಪ್ಪಂದವಾಯಿತೆಂಬುದನ್ನು ಇರ್ವರೂ ಅರಿತರು.

ಎಲ್ಲರೂ ಹೊರಗೆ ಹೋದ ಮೇಲೆ ಸತ್ಯೇಂದ್ರ ಸರಳೆಯ ಬಳಿ ಬಂದು ಕುಳಿತ. ಅತ್ಯಂತ ದುಃಖ, ವೇದನೆಯಿಂದ ಮಾತು ಬರಲಿಲ್ಲ ಅವನಿಗೆ. ಆದಾಗ್ಯೂ ನೀರಸ, ಕುಗ್ಗಿದ ದನಿಯಿಂದ ಸತ್ಯೇಂದ್ರ "ಸರಳಾ" ಎಂದು ಕೂಗಿದ. ಒಣಗಿದ ಗಂಟಲಿಂದ ಬಂದ ದನಿ? ಆಗಿದ್ದರೇನು? ಅದೇ ಚಿರಪರಿಚಿತ ದನಿ, ಅದೇ ಪ್ರೀತಿಯ ಕರೆ— ಸರಳಾ! ಇದರಲ್ಲಿ ತಪ್ಪೇನಾದರೂ ಆಗಬಲ್ಲದೆ? ಸರಳೆಯು ಕಣ್ದೆರೆದು ನೋಡಿದಳು. ಹರದೇವರು ಬಂದುದನ್ನು ನೋಡಿ ಸತ್ಯೇಂದ್ರನೂ ಬಂದಿರುವನೆಂಬುದನ್ನು ಆಕೆಯು ಅನುಮಾನಿಸಿದ್ದಳು. ಗಂಡನ ಕೂಡ ತಮಾಷೆ ಮಾಡುವುದು ಸರಳೆಗೆ ಪ್ರೀತಿಯ ಕೆಲಸ. ಆಕೆಯು ನಕ್ಕು "ಕರೆದು ಕೊಂಡು ಹೋಗಲು ಬಂದಿರುವಿರೇನು?" ಎಂದು ಕೇಳಿದಳು.

ಆಕೆಯ ಕಂಠ ಕುಗ್ಗಿತ್ತು. ಇದುವರೆಗೆ ಸತ್ಯೇಂದ್ರ ಹೇಗೊ ತನ್ನ ಕಂಬನಿಗಳನ್ನು ತಡೆದು ಹಿಡಿದಿದ್ದ. ಸರಳೆಯ ಪರಿಸ್ಥಿತಿಯನ್ನು ನೋಡಿ ಕಂಬನಿಗೆ ಹಾಕಿದ ಉಸುರಿನ ಕಟ್ಟೆ ಒಡೆದು ಹೋಯಿತು.

ಈ ವೇಳೆಯಲ್ಲಿ ಅಳುವುದು ಒಳ್ಳೆಯದಲ್ಲವೆಂದು ಗೊತ್ತಿತ್ತು. ಆದರೆ ಒಂದು ಬಾರಿ ವಿರಹದಿಂದ ಬಳಲಿದ ಕಣ್ಣುಗಳಿಗೆ ಇಷ್ಟು ತಿಳಿವು ಇರುವುದೇ? ಬಳಿಕ ಕಣ್ಣುಗಳು ಒಂದೊಂದೇ ಹನಿಯನ್ನು ಉದುರಿಸ ತೊಡಗಿದುವು. ಅವು ಈ ದಿನ ಸರಳೆಯ ಶರೀರದಲ್ಲಿ ಒಂದುಗೂಡಿ ಹೋಗುತಿರುವುವು. ಅವಕ್ಕೆ ಇದಕ್ಕೂ ಪೂರ್ವದಲ್ಲಿ ಇಂತಹ ಸುಅವ-ಸರವು ದೊರೆತಿರುವುದೇ ಎಂದಾದರೂ? ಎಂದೂ ದೊರೆತಿರುವುದಿಲ್ಲ. ಅವು ನಿಮಗಾಗಿ ಮತ್ತು ಸರಳೆಯ ನಲುನಾಗಿ ಇಂತಹ ಸಂಧಿಯನ್ನು ಕಳೆದುಕೊಳ್ಳುವುವೆ? ಸರಳೆಯು ತನ್ನ ಪತಿಯು ಅಳುವುದನ್ನು ಎಂದೂ ನೋಡಿರಲಿಲ್ಲ. ಆಕೆಯೂ ಅತ್ತುಬಿಟ್ಟಳು. ಬಹಳ ವೇಳೆಯು ಕಳೆದ ಬಳಿಕ ಆಕೆಯು ಕಣ್ಣುಗಳನ್ನೊರಸಿಕೊಂಡು "ಛೀ, ಅಳುವಿರೇಕೆ? ಗಂಡಸರು ಅಳಬೇಕೇನು?" ಎಂದಳು.

"ಇದೇನು?— ಸರಿ, ಸರಳಾ ಚೆನ್ನಾಗಿ ತಿಳಿದುಕೊಂಡೆ! ಅಂತರ್ದಾಹದಿಂದ ಅವರು ಸುಟ್ಟು ಭಸ್ಮವಾದರೂ ಚಿಂತೆಯಿಲ್ಲ,

ಒಂದು ಹನಿ ಕಣ್ಣೀರನ್ನು ಸುರಿಸಬಾರದು! ಕಂಬನಿಗಳು ಹೆಂಗುಸರಿಗಾಗಿ, ಗಂಡುಸರಿಗೆ ಅವುಗಳ ಮೇಲೆ ಅಧಿಕಾರವಿಲ್ಲ! ಮರ್ಮವೇದನೆಯಿಂದ ಅವರು ಸುಟ್ಟುಹೋಗಲಿ, ಆದಾಗ್ಯೂ ಅವರು ಅಳಬಾರದು! ಅಳುವುದರಿಂದ ಅವರು ಹೆಂಗುಸರಾಗಿ ಬಿಡುವರು. ಸರಳಾ! ಈ ಬಗೆಯ ನಿಯಮವನ್ನು ನೀವು ಮಾಡಿರುವಿರಾ?"

ಸರಳೆಯು ಪತಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು ಮತ್ತು ಅದನ್ನು ಮೆಲ್ಲಗೆ ಹಿಸುಕುತ್ತ ಅಳುತ್ತ "ಪುನರ್ಜನ್ಮವನ್ನು ಒಪ್ಪುವಿರಾ?" ಎಂದಳು.

ಸತ್ಯೇಂದ್ರ ಅಳುತ್ತ ಅಳುತ್ತ "ಒಪ್ಪುತ್ತಿದ್ದೆನೊ ಇಲ್ಲವೊ ಎಂಬುದು ಗೊತ್ತಿಲ್ಲ. ಆದರೆ ಈ ದಿನ ಸಂಪೂರ್ಣವಾಗಿ ಒಪ್ಪುವೆ" ಎಂದ.

ಸರಳೆಯ ಮುಖದ ಮೇಲೆ ನಗುವು ಕಾಣಿಸಿತು.

ಔಷಧ ಕುಡಿಸುವ ವೇಳೆಯಾಯಿತು. ಕಾಮಾಖ್ಯ ಬಾಬೂ, ಹರದೇವ ಬಾಬೂ ಮತ್ತು ಡಾಕ್ಟರ ಸಾಹೇಬರು ಕೋಣೆಯೊಳಗೆ ಬಂದರು. ಡಾಕ್ಟರರು ನಾಡಿಯನ್ನು ನೋಡಿ "ಆಸೆ ಅಷ್ಟಿಲ್ಲ, ಆದರೂ ಪರಮಾತ್ಮನ ಇಚ್ಛೆ" ಎಂದರು.

ದೇವರ ಇಚ್ಛೆಯಂತೆ ಮರುದಿನವೇ ಮುಂಜಾನೆ ಸರಳೆಯು ಸತ್ಯೇಂದ್ರನಾಥನನ್ನು ಬಿಟ್ಟು ಪರಲೋಕಕ್ಕೆ ಹೋದಳು.

ಸಾಯಂಕಾಲಕ್ಕೆ ಹರದೇವ ಬಾಬುಗಳು ಸತ್ಯೇಂದ್ರನನ್ನು ಕರೆದುಕೊಂಡು ಕಲಕತ್ತೆಗೆ ಹಿಂತಿರುಗಿ ಬಂದರು.

೩

ಏನಾಗಿದೆಯೊ ಏನೊ. ಅರಸುಮಗನಂತೆ ಸುಪ್ಪತ್ತಿಗೆಯ ಮೇಲೆ ಮಲಗಿ ಇಂದ್ರಪದವಿಯ ಆನಂದವನ್ನು ಪಡೆಯುತ್ತಿದ್ದೆ, ಆಗ ಯಾರೊ ಎಬ್ಬಿಸಿ ಆ ಆನಂದವನ್ನು ಮಣ್ಣುಗೂಡಿಸಿದರು. ಅರ್ಧ ರಾತ್ರಿಯಾಗಿರುವುದು, ಎದ್ದು ಕುಳಿತಿರುವೆ. ನಿದ್ದೆ ಹಾರಿಹೋಗಿರುವುದು. ನನ್ನ ಜೀವನಸಂಗಿನಿಯ ಅರ್ಧಭಿನ್ನ ಮಂಚದ ಮೇಲೆ ಬಿದ್ದುಕೊಂಡಿರುವೆ—.

ನಾನು ಅಳಲೊ ನಗಲೊ? ಸುಖದ ಪ್ರವಾಹದಲ್ಲಿ ಅನಂತದ ಕಡೆಗೆ ಹರಿದು ಹೋಗುತ್ತಲಿದ್ದೆ, ಯಾರೊ ಅಪರಿಚಿತರು ಬಂದು ನನ್ನನ್ನು ಬಿಗಿದು ಬಿಟ್ಟಿರುವರು. ಅದರಿಂದ ನನ್ನ ಬಿಡುಗಡೆಯಾಗುವುದೊ ಇಲ್ಲವೊ. ಎಲ್ಲವೂ ತಿರುವು ಮುರುವು ಆಗಿರುವುದು. ಜೀವನದ ಕೇಂದ್ರ ವನ್ನು ಕೂಡ ಯಾರೊ ಅದನ್ನು ಎಳೆದುಕೊಂಡು ಅದರ ಎಲ್ಲೆಯ ಹೊರಗೆ ಒಯ್ದು ಬಿಟ್ಟಿರುವರು! ಏನೂ ಹೊಳೆಯಲೊಲ್ಲದಾಗಿರುವುದು! ಇದೇನಾಯಿತು ಇದು? ಮಧ್ಯ ರಾತ್ರಿಯಲ್ಲಿ ಸತ್ಯೇಂದ್ರನಾಥ ಕಿಡಿಕಿ ಯಲ್ಲಿ ಕುಳಿತುಕೊಂಡು ಸಾಗರಪುರದ ಕತ್ತಲನ್ನು ನೋಡುತ್ತ ಬಿದ್ದ. ಗಿಡ–ಬಳ್ಳಿಗಳು ಕೂಡ ಸತ್ಯೇಂದ್ರನೊಡನೆ ಯಾವುದೊ ಒಂದು ನಿಸ್ತಬ್ಧ ಭಾವದೊಡನೆ ವಿನಿಮಯ ಮಾಡುತ್ತಿದ್ದುವು.

ಸೊಂಯ್ ಸೊಂಯ್ ಮಾಡುತ್ತ ರಾತ್ರಿಯ ಗಾಳಿಯು ಬಂದಿತು. ಏನಾದರೂ ಹೇಳಿಹೋಯಿತೇನು? ಹೇಳಲಿಲ್ಲವೇಕೆ? ಅದೇ ಒಂದು ಮಾತನ್ನು, ಎಲ್ಲ ವಸ್ತುಗಳೂ ಅದೊಂದೇ ಮಾತನ್ನು ಹೇಳುತ್ತ ತಿರುಗು ತ್ತವೆ— ಏನಾಗಿರುವುದು? ನವಿಲು ಪ್ರಿಯತಮೆ ಎಂದು ಕೇಕೆ ಹಾಕುವು ದಿಲ್ಲ, ತದ್ವಿರುದ್ಧವಾಗಿ ನುಡಿಯುವುದು— ಅವಳು ತೀರಿಹೋದಳು, ತೀರಿಹೋದಳು! ಎಂದು. ಉಳಿದ ಹಕ್ಕಿ ಪಕ್ಕಿಗಳೂ ಇದನ್ನೇ ನುಡಿಯು ವುವು. ಮನೆಯ ಮಹಾಲಕ್ಷ್ಮಿ ಸತ್ತುಹೋದಳೆಂದು ಉಲಿಯುವುವು! ಇವೆಲ್ಲವೂ ಇದೊಂದೇ ಮಾತನ್ನು ಏಕೆ ಹೇಳುವುವು? ಸುಯ್ಯೆಂದು ಸುಳಿಯುವ ನಿಶಾ–ಪವನವೂ ಸರಿಯಾಗಿ ಇದನ್ನೇ ಹೇಳುವುದು— ಇಲ್ಲ, ಇಲ್ಲ, ಆಕೆಯಿಲ್ಲ!

ಸತ್ಯೇಂದ್ರ, ಹೇಗಿದೆ ನಿನ್ನ ಪ್ರಕೃತಿ? ಸಹಿಸಲಸಾಧ್ಯವಾದ ತಲೆ ನೋವು ಇರುವುದೇನು? ಈ ಮಾತಾಗಿ ಬಹಳ ದಿನಗಳಾದುವು, ಸ್ವಲ್ಪ ಮಲಗಿಕೊ. ಏನು, ಸದಾಕಾಲ ಈ ಕಿಡಕಿಯಲ್ಲಿ ಹೀಗೆಯೆ ಕುಳಿತಿರುವೆ ಯೇನು? ಸತ್ಯೇಂದ್ರ ಕತ್ತಲಲ್ಲಿ ಚಿಕ್ಕೆಗಳನ್ನು ನೋಡುತ್ತಿದ್ದ. ಅವುಗಳಲ್ಲಿ ಅತ್ಯಂತ ಕ್ಷೀಣವಾಗಿ ಮಿನುಗುವ ಚಿಕ್ಕೆಯನ್ನು ಲಕ್ಷ್ಯಪೂರ್ವಕವಾಗಿ ಅವನು ನೋಡುತ್ತಿದ್ದ.

ಕಣ್ಣುಗಳನ್ನು ಸ್ವಲ್ಪಾದರೂ ಮುಚ್ಚುವ ಧೈರ್ಯ ಅವನಿಗಿಲ್ಲ, ಅದೆಲ್ಲಿ ಮಾಯವಾಗಿ ಹೋಗುವುದೊ ಎಂಬ ಭಯ ಅವನಿಗೆ. ನೋಡಿ ನೋಡಿ ದಣಿದ ಬಳಿಕ ಅವನು ಅಲ್ಲಿಯೆ ಮಲಗಿಬಿಡುವ. ಬೆಳಗಾದ ಬಳಿಕ ಪುನಃ ಅದನ್ನೇ ನೋಡಲು ಯತ್ನಿಸುವ. ಬೆಳಕು ಈಗ ಅವನಿಗೆ ಸಹ್ಯವಾಗುವುದಿಲ್ಲ. ಬೆಳದಿಂಗಳಿಂದ ಈಗ ಅವನಿಗೆ ಆನಂದವು ದೊರೆಯುವುದಿಲ್ಲ! ಇಷ್ಟು ಮಂದ ಬೆಳಕಿನ ಚಿಕ್ಕೆಯು ಈ ಪ್ರಕಾಶದಲ್ಲಿ ಅವನಿಗೆಲ್ಲಾದರೂ ಕಾಣಿಸುವುದೆ?

ಸತ್ಯೇಂದ್ರ ಎಂ. ಎ. ಪರೀಕ್ಷೆಯಲ್ಲಿ ನಾಪಾಸಾಗಿರುವ. ಪಾಸಾಗ ಬೇಕೆಂಬ ಬಯಕೆಯೂ ಈಗ ಅವನಿಗಿಲ್ಲ. 'ಪಾಸು' ಆಗುವುದರಿಂದ ಈಗ ಏನು ಆ ಚಿಕ್ಕೆಯು ಅವನ ಬಳಿಗೆ ಬರುವುದೇ?

ಪರದೇವ ಬಾಬುಗಳು ಈಗ ಪರಿವಾರದೊಡನೆ ತಮ್ಮ ಊರಿಗೆ ಬಂದರು. ಮನೆಯಲ್ಲಿದ್ದುಕೊಂಡೇ ಚೆನ್ನಾಗಿ ಅಭ್ಯಾಸ ಮಾಡಬಹು ದೆಂದು ಈಗ ಸತ್ಯೇಂದ್ರ ಹೇಳುವ; ಪಟ್ಟಣದ ಗಲಾಟೆಯಲ್ಲಿ ಅಭ್ಯಾಸ ಮಾಡುವುದಾಗುವುದಿಲ್ಲ ಎಂದು ತಂದೆಗೆ-ತಾಯಿಗೆ ಹೇಳುವ. ಸತ್ಯೇಂದ್ರ ಈಗ ಮೊದಲಿನ ಸತ್ಯೇಂದ್ರನಿಲ್ಲ, ಬೇರೆಯವನೇ ಆಗಿರುವ. ಅವನಿಗೆ ಬಹಳ ದಿನಗಳಿಂದ ಊಟಕ್ಕೆ ದೊರೆತಿಲ್ಲವೇನೊ ಎಂಬಂತೆ ಕಾಣುವುದು ಅವನ ಮೊಗ. ಬಹಳ ದಿನ ಕಾಯಿಲೆ ಬಿದ್ದು ಎದ್ದಿರುವಂತೆ ತೋರುವ. ಮೊಗದ ಮೇಲೆ ಕಳೆಯಿಲ್ಲ, ನಗುವಿಲ್ಲ, ಗೆಲುವಿಲ್ಲ.

ಮಧ್ಯಾಹ್ನದಲ್ಲಿ ಕೋಣೆಯ ಬಾಗಿಲು ಮುಚ್ಚಿಕೊಂಡು ಸತ್ಯೇಂದ್ರ ಚಿತ್ರಪಟಗಳನ್ನು ಸ್ವಚ್ಛ ಮಾಡುವ, ತನ್ನ ಪುಸ್ತಕಗಳನ್ನು ನೀಟಾಗಿಡಲು ತೊಡಗುವ, ಹಾರ್ಮೋನಿಯಂ ತೆರೆದು ಸುಳ್ಳುಸುಳ್ಳೇ ಸ್ವಚ್ಛ ಮಾಡುವ, ಸರಳೆಯ ಸ್ವಚ್ಛವಾದ ಪುಸ್ತಕಗಳನ್ನು ಸ್ವಚ್ಛ ಮಾಡುವ, ಸುಂದರವಾದ ಕಾಗದಗಳನ್ನೂ ಕವರುಗಳನ್ನೂ ತೆಗೆದುಕೊಂಡು ಸರಳೆಗೆ ಪತ್ರ ಬರೆಯ ತೊಡಗುವ, ಅದಾವುದೊ ವಿಳಾಸ ಬರೆದು ಪತ್ರವನ್ನು ತನ್ನ ಪೆಟ್ಟಿಗೆ ಯಲ್ಲಿ ಬಚ್ಚಿಡುವ. ಸತ್ಯೇಂದ್ರನಾಥ! ನೀನು ಈಗ ಒಬ್ಬನೇ ಇರುವು ದಿಲ್ಲ. ಎಷ್ಟೋ ಜನರ ಭಾಗ್ಯವು ನಿನ್ನಂತೆಯೆ ಕಡಮೆ ವಯಸ್ಸಿನಲ್ಲಿ

ಸುಟ್ಟು ಬೂದಿಯಾಗುವುದು. ಆದರೆ ಅವರೆಲ್ಲರೂ ನಿನ್ನಂತೆಯೇ ಹುಚ್ಚ ರಾಗುವುರೇನು ? ಹುಷಾರಿ ಸತ್ಯೇಂದ್ರ ! ಯಾವ ಮಾತಿಗಾದರೂ ಸರಿಯೆ ಒಂದು ಸೀಮೆಯುಂಟು. ಸ್ವರ್ಗೀಯ ಪ್ರೇಮಕ್ಕೂ ಒಂದು ನಿರ್ದಿಷ್ಟ ವಾದ ಮೇರೆಯುಂಟು. ಸೀಮೆಯನ್ನು ಮೀರಿ ಹೋದರೆ ಕಷ್ಟಕ್ಕೆ ಈಡಾಗುವೆ, ಹುಷಾರಿ! ಯಾವನೂ ಯಾರನ್ನೂ ಕೊನೆಯ ವರೆಗೆ ಬಳಿಯಲ್ಲಿ ಇರಿಸಿಕೊಳ್ಳಲಾರ.

ಸತ್ಯೇಂದ್ರನ ತಾಯಿ ಬಹಳ ಬುದ್ಧಿವಂತೆ. ಒಂದು ದಿವಸ ಆಕೆಯು ಪತಿಯನ್ನು ಕರೆದು "ನೋಡಬಾರದೆ ನಮ್ಮ ಸತ್ಯೇಂದ್ರ ಹೇಗಾಗಿರುವ?" ಎಂದಳು.

"ನೋಡುತ್ತಿರುವೆ, ಆದರೆ ಮಾಡುವುದೇನು ?"

"ಎರಡನೆಯ ಮದುವೆ ಮಾಡಿರಿ. ಒಳ್ಳೆಯ ಸೊಸೆ ಬಂದರ ಪುನಃ ಸತ್ಯ ನಗತೊಡಗುವ, ಮಾತನಾಡತೊಡಗುವ, ನಲಿಯತೊಡಗುವ."

ಆ ದಿನ ಸತ್ಯೇಂದ್ರ ಊಟಕ್ಕೆ ಕುಳಿತ. ತಾಯಿಯೆಂದಳು "ನನ್ನ ಮಾತೊಂದನ್ನು ಕೇಳುವಿಯಾ ಮಗೂ ?"

"ಏನು ?"

"ಇನ್ನೊಂದು ಮದುವೆಯನ್ನು ಮಾಡಿಕೊ."

ಸತ್ಯೇಂದ್ರ ನಕ್ಕು "ಇದೇ ಏನು! ಈ ವಯಸ್ಸಿನಲ್ಲಿ ಇನ್ನು ಇದೆಲ್ಲ ಏಕೆ ?" ಎಂದ.

ತಾಯಿಯು ಮೊದಲೇ ಕಂಬನಿಗಳನ್ನು ಕೂಡಿಸಿಟ್ಟುಕೊಂಡಿದ್ದಳು. ಅವು ಈಗ ತಾವಾಗಿಯೆ ಹೊರಬೀಳತೊಡಗಿದುವು. ಈಗ ಕಂಬನಿ ಗಳನ್ನೊರಸಿಕೊಂಡು ಆಕೆಯು "ಮಗೂ, ಇಪ್ಪತ್ತೊಂದು ವರ್ಷ; ಬಹಳ ವಯಸ್ಸೇನು ? ಆದರೆ ಸರಳೆಯ ನೆನಪು ಬಂದಕೂಡಲೆ ಈ ಮಾತುಗಳನ್ನು ಆಡಲಿಕ್ಕೆ ಮನಸ್ಸೇ ಒಪ್ಪುವುದಿಲ್ಲ. ಆದರೆ ಈಗ ನಾನೊಬ್ಬಳೇ ಇರಲಾರೆ." ಎಂದಳು.

ಮರುದಿನ ಹರದೇವ ಬಾಬುಗಳೂ ಸತ್ಯೇಂದ್ರನನ್ನು ಕರೆದು ಇವೇ

ನುಡಿಗಳನ್ನಾಡಿದರು. ಸತ್ಯೇಂದ್ರ ಯಾವ ಉತ್ತರವನ್ನೂ ಕೊಡಲಿಲ್ಲ. ಮೌನವು ಒಪ್ಪಿಗೆಯ ಲಕ್ಷಣವೆಂದು ಹರದೇವ ಬಾಬುಗಳು ತಿಳಿದು-ಕೊಂಡರು.

ಸತ್ಯೇಂದ್ರ ತನ್ನ ಕೋಣೆಯೊಳಗೆ ಬಂದು ಸರಳೆಯ ಚಿತ್ರದ ಮುಂದೆ ನಿಂತು ಎಂದ "ಸರಳಾ, ಕೇಳುವಿಯೇನು? ನನಗೆ ಇನ್ನೊಂದು ಮದುವೆಯಾಗುವುದು!" ಚಿತ್ರವು ಮಾತನಾಡಲಾರದು ಮಾತನಾಡ ಬಲ್ಲುದಾಗಿದ್ದರೆ ಏನು ಹೇಳುತ್ತಿತ್ತು? "ಒಳ್ಳೇದು" ಎಂದು ಹೇಳು ತ್ತಿತ್ತು, ಮತ್ತೇನು ಹೇಳುತ್ತಿತ್ತು?

ಈ ಬಾರಿ ಸತ್ಯೇಂದ್ರನ ಮದುವೆ ಕಲಕತ್ತೆಯಲ್ಲಿ ಆಯಿತು. 'ಶುಭ ದೃಷ್ಟಿ'ಯ ವೇಳೆಯಲ್ಲಿ ಸತ್ಯೇಂದ್ರ ನೋಡಿದ— ಅತ್ಯಂತ ಸುಂದರ ಮೊಗ. ಇರಲಿ ಬಿಡಿರಿ, ಆದಾಗ್ಯೂ ಅವನು ಯೋಚಿಸಿದ— ತಲೆಯ ಮೇಲೆ 'ಒಜ್ಜೆ'ಯೊಂದು ಬಿದ್ದಿತು.

ಮದುವೆಯಾದ ಬಳಿಕ ಎರಡು ವರ್ಷ ನಳಿನಿಯು ತಾಯ ಮನೆ ಯಲ್ಲೇ ಇದ್ದಳು. ಮೂರನೆಯ ವರ್ಷ ಆಕೆಯು ಅತ್ತೆಯ ಮನೆಗೆ ಬಂದಳು. ತನ್ನೆದುರಿನಲ್ಲಿ ಚಂದ್ರನಂತೆ ಇರುವ ಮುಖವನ್ನು ನೋಡಿ ಸರಳೆಯನ್ನು ಮರೆಯಲೆತ್ನಿಸಿದ. ಪುನಃ ಮನೆತನವನ್ನು ನಡೆಯಿಸಲು ಪ್ರಯತ್ನ ಮಾಡಿದ. ರಾತ್ರಿಯಲ್ಲಿ ಸತ್ಯೇಂದ್ರ ಮತ್ತು ನಳಿನಿ ಹತ್ತಿರ ಹತ್ತಿರ ಮಲಗಿಕೊಂಡಿರುವಾಗ ಇಬ್ಬರೂ ಪರಸ್ಪರ ಮಾತನಾಡು ತ್ತಿರಲಿಲ್ಲ.

ನಳಿನಿಯು ಯೋಚಿಸುತ್ತಿದ್ದಳು— ಇಷ್ಟು ಉಪೇಕ್ಷೆ ಏಕೆ?

ಸತ್ಯೇಂದ್ರ ಯೋಚಿಸುತ್ತಿದ್ದ— ಈಕೆ ಯಾರು ಸರಳೆಯ ಸ್ಥಳದಲ್ಲಿ ಮಲಗುತ್ತಿರುವವಳು?

ಹೊಸದಾಗಿ ಬಂದ ಸೊಸೆ; ಗಂಡನ ಕೂಡ ಮಾತನಾಡಲಾರಳು. ಆದುದರಿಂದ ಸತ್ಯೇಂದ್ರ ಯೋಚಿಸಿದ— ಮಾತನಾಡುವುದಿಲ್ಲ, ಒಳ್ಳೆಯದೆ ಆಯಿತು!

ಒಂದು ದಿನ ರಾತ್ರಿ ಸತ್ಯೇಂದ್ರನಿಗೆ ಎಚ್ಚರಾಯಿತು. ಆಗ ಅವನು ಹಾಸಿಗೆಯ ಮೇಲೆ ಯಾರೂ ಇಲ್ಲದುದನ್ನು ನೋಡಿದ. ಚೆನ್ನಾಗಿ ಕಣ್ದೆರೆದು ಸುತ್ತಲೂ ನೋಡಿದ. ಯಾರೊ ಕಿಡಕಿಯಲ್ಲಿ ಕುಳಿತಿರುವರು. ಕಿಡಿಕಿಯು ತೆರೆದಿರುವುದು. ಅದರೊಳಗಿಂದ ಚಂದ್ರಪ್ರಕಾಶವು ಒಳಗೆ ಬರುತ್ತಿರುವುದು. ಆ ಬೆಳಕಿನಲ್ಲಿ ಸತ್ಯೇಂದ್ರನಿಗೆ ನಳಿನಿಯ ಮೊಗ ಸ್ವಲ್ಪ ಕಾಣಿಸಿತು. ನಿದ್ದೆಯ ಮದವಿದ್ದ ಆಕೆಯ ಮೊಗ ಆ ಪ್ರಕಾಶದಲ್ಲಿ ಸತ್ಯೇಂದ್ರನಿಗೆ ಅತ್ಯಂತ ಸುಂದರವಾಗಿ ಕಾಣಿಸಿತು. ಅವನು ಕಿವಿಗೊಟ್ಟು ಕೇಳಿದ— ನಳಿನಿಯು ರೋದಿಸುತ್ತಿದ್ದಳು.

ಸತ್ಯೇಂದ್ರ ಕೂಗಿದ "ನಳಿನೀ— "

ನಳಿನಿಯು ಬೆಚ್ಚಿಬಿದ್ದಳು. ಪತಿದೇವ ಕೂಗುತ್ತಿರುವ! ಪುತ್ತೂ-ಬ್ಬಾಕೆಯಾಗಿದ್ದರೆ ಏನು ಮಾಡುತ್ತಿದ್ದಳೊ ಗೊತ್ತಿಲ್ಲ. ಆದರೆ ನಳಿನಿಯು ಮೆಲ್ಲಗೆ ಎದ್ದು ಬಂದು ಹತ್ತಿರ ಕುಳಿತಳು.

ಸತ್ಯೇಂದ್ರ ಕೇಳಿದ "ಏಕೆ ಅಳುತ್ತಿರುವೆ?" ಕಂಬನಿಗಳು ಇಮ್ಮಡಿಸಿ ಹೊರಸೂಸತೊಡಗಿದುವು. ಆಕೆಯು ತನ್ನ ಹದಿನಾರನೆಯ ವಯಸ್ಸಿನಲ್ಲಿ ಕೇಳಿದ ಪ್ರೀತಿಯ ನುಡಿಯಿದು!

ಬಹಳ ಹೊತ್ತಿನ ವರೆಗೆ ತಡೆತಡೆದು ಅತ್ತು ಅತ್ತು ಆಕೆಯು ಕಂಬನಿಗಳನ್ನು ಒರೆಸಿಕೊಂಡು ಮೆಲ್ಲಗೆ ನುಡಿದಳು "ನಿಮಗೆ ನಾನು ಒಪ್ಪುವುದಿಲ್ಲವೆ?"

ಅದೇಕೊ ಏನೊ ಸತ್ಯೇಂದ್ರನಿಗೂ ಅಳುವು ಒಳಗಿಂದ ಒತ್ತರಿಸಿ ಬರುತ್ತಿದ್ದಿತು. ಅದನ್ನು ತಡೆಯುತ್ತ "ನೀನು ಒಪ್ಪುವುದಿಲ್ಲ ಎಂದು ಯಾರು ಹೇಳಿದರು? ಆದರೆ ಇಷ್ಟು ಮಾತ್ರ ನಿಜ, ನಿನ್ನ ಚಿಂತೆಯನ್ನು ನಾನು ಮಾಡದಾಗಿರುವೆ." ಎಂದ.

ನಳಿನಿಯು ಉತ್ತರ ಕೊಡದೆ ಎಲ್ಲವನ್ನೂ ಸುಮ್ಮಗೆ ಆಲಿಸ ತೊಡಗಿದಳು.

ಸತ್ಯೇಂದ್ರ ಸ್ವಲ್ಪ ಹೊತ್ತು ಸುಮ್ಮಗಿದ್ದು ಪುನಃ ಎನ್ನತೊಡಗಿದ

''ನಾನು ಯಾರಿಗೂ ಈ ಮಾತನ್ನು ಹೇಳಬಾರದೆಂದು ಯೋಚಿಸು ತ್ತಿದ್ದೆ; ಆದರೆ ಹೇಳದಿರುವುದರಿಂದ ಯಾವ ಪ್ರಯೋಜನವೂ ಇಲ್ಲ. ನಿನ್ನೆದುರಿಗೆ ನಾನೇನೂ ಬಚ್ಚಿಡುವುದಿಲ್ಲ. ಎಲ್ಲ ಸಂಗತಿಯನ್ನು ನಾನು ಬಿಚ್ಚಿ ಹೇಳಿದ್ದರೆ ನಾನು ಹೀಗೇಕೆ ಇರುವೆನೆಂಬುದನ್ನು ನೀನು ತಿಳಿದು ಕೊಳ್ಳುತ್ತಿದ್ದೆ. ನಾನು ಸರಳೆಯನ್ನು— ನನ್ನ ಮೊದಲ ಹೆಂಡತಿಯನ್ನು ಇನ್ನೂ ಮರೆತಿಲ್ಲ. ಮರೆಯುವೆನೆಂಬ ಭರವಸೆಯೂ ಇಲ್ಲ. ಮೇಲಾಗಿ ಮರೆಯುವ ಇಚ್ಛೆಯೂ ಇಲ್ಲ. ನೀನು ಒಬ್ಬ ನಿರ್ಭಾಗ್ಯನ ಕೈ ಹಿಡಿದಿ ರುವೆ; ನಿನ್ನನ್ನು ನಾನು ಸುಖಿಯಾಗಿ ಇಡಬಲ್ಲೆನೆಂಬ ಆಸೆಯು ಕೂಡ ಕಾಣಿಸಲೊಲ್ಲದು. ನಾನು ನನ್ನ ಇಚ್ಛೆಗೆ ಅನುಸಾರವಾಗಿ ನಿನ್ನನ್ನು ಮದುವೆಯಾಗಿಲ್ಲ— ನನ್ನ ಇಚ್ಛೆಯಂತೆ ಕೂಡ ನಿನ್ನನ್ನು ನಾನು ಪ್ರೀತಿಸ ಲಾರೆನೆಂದು ತೋರುವುದು.''

ಗಂಭೀರ ರಾತ್ರಿಯಲ್ಲಿ ಇರ್ವರೂ ಇದೇ ರೀತಿಯಾಗಿ ಬಹಳ ಹೊತ್ತಿನವರೆಗೆ ಕುಳಿತಿದ್ದರು. ನಳಿನಿ ಅಳುತ್ತಿರುವಳೆಂದು ಸತ್ಯೇಂದ್ರನಿಗೆ ಗೊತ್ತಾಯಿತು. ಅವನೂ ಅತ್ತಿದ್ದನೇನು ? ಒಂದೊಂದಾಗಿ ಸರಳೆಯ ಮಾತುಗಳು ನೆನಪಿಗೆ ಬರತೊಡಗಿದುವು. ಮೆಲ್ಲ ಮೆಲ್ಲಗೆ ಆಕೆಯ ಸುಂದರ ಮೊಗವು ಹೃದಯ ದರ್ಪಣದಲ್ಲಿ ಕಾಣತೊಡಗಿತು. ಅದೇ ಮಾತು ಎದೆಯಲ್ಲಿ ಮಿಡಿಯತೊಡಗಿತು "ಕರೆದುಕೊಂಡು ಹೋಗಲು ಬಂದಿರುವಿರಾ ?" ಕಂಬನಿಗಳು ತಾವಾಗಿಯೆ ಸತ್ಯೇಂದ್ರನ ದೃಷ್ಟಿ ಯನ್ನು ತಡೆದು ನಿಲ್ಲಿಸಿದುವು. ಬಳಿಕ ಕೆನ್ನೆಗಳ ಮೇಲಿಂದ ಅವು ಒಂದೊಂದಾಗಿ ಕೆಳಗೆ ಬೀಳತೊಡಗಿದುವು.

ಕಣ್ಣುಗಳನ್ನೊರಸಿಕೊಂಡು ಸತ್ಯೇಂದ್ರ ಮೆಲ್ಲಗೆ ನಳಿನಿಯ ಎರಡೂ ಕೈಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ''ಅಳಬೇಡ ನಳಿನೀ, ಇದರಲ್ಲಿ ನನ್ನ ಕೈಯೇನಿದೆ? ನಾನು ಹಗಲು-ರಾತ್ರಿ ನನ್ನೊ ಳಗೇ ಎಂತಹ ದುಃಖವನ್ನು ಅನುಭವಿಸುತ್ತಿರುವೆನೆಂಬುದು ಯಾರಿಗೂ ಗೊತ್ತಿಲ್ಲ. ಮನದಲ್ಲಿ ಅತ್ಯಂತ ನೋವು ಇರುವುದು. ಈ ದುಃಖವು ಎಂದಾದರೂ ದೂರವಾದಲ್ಲಿ ನಾನು ನಿನ್ನನ್ನು ಪ್ರೀತಿಸಬಲ್ಲೆ ಮತ್ತು ನಿನ್ನನ್ನು ಅತ್ಯಂತ ಚೆನ್ನಾಗಿ ಇಡಬಲ್ಲೆ'' ಎಂದ.

ಈ ವಿಷಾದ ತುಂಬಿದ ಎದೆಯ ಬೆಲೆಯನ್ನು ಎಷ್ಟು ಜನ ಅರಿಯ ಬಲ್ಲರು! ನಳಿನಿ ಅತ್ಯಂತ ಬುದ್ಧಿವಂತೆ. ಆಕೆಯು ಪತಿಯ ದುಃಖವನ್ನು ಅರಿತಳು. ಪತಿಯು ತನ್ನನ್ನು ಪ್ರೀತಿಸುವುದಿಲ್ಲ ಎಂಬುದನ್ನು ಅವನಿಂದಲೇ ಕೇಳಿಕೊಂಡಳು. ಆದರೂ ಆಕೆ ಕೋಪಗೊಳ್ಳಲಿಲ್ಲ. ಆಕೆಗೆ ಅಭಿಮಾನವೂ ಬರಲಿಲ್ಲ. ಮೂರ್ಖ ಹುಡುಗೆ! ಹದಿನಾರನೆಯ ವಯಸ್ಸಿನಲ್ಲಿ ಕೋಪಿಸದಿದ್ದರೆ, ಅಭಿಮಾನ ತಾಳದಿದ್ದರೆ ಇನ್ನೆಂದು ತಾಳುವಿ? ಆದರೆ ಆಕೆಯು ಯೋಚಿಸಿದಳು "ಮೊದಲು ಅಭಿಮಾನವೋ? ಕೋಪವೋ? ಪತಿಯೊ?"

'ಯಾವ ರೀತಿಯಲ್ಲಿ ಗಂಡನ ದುಃಖವು ದೂರವಾಗುವುದು?' ಎಂಬುದನ್ನೇ ಆಕೆಯು ಆ ದಿನದಿಂದ ಯೋಚಿಸುತ್ತಿರುವಳು. ಸವತಿಯನ್ನು ಗಂಡನು ಏನನ್ನು ಮಾಡಿದರೆ ಮರೆಯುವನು ಎಂಬುದನ್ನು ಆಕೆಯು ಅರಿಯದಾದಳು. ಯಾರಾದರೂ ವೇದನೆಯನ್ನು ವೇದನೆಯಿಂದ ಕೇಳುವವರು ಇದ್ದರೆ, ಕಷ್ಟಕಾಲದಲ್ಲಿ ಸಹಾನುಭೂತಿಯನ್ನು ತೋರಿಸುವವರು ಇದ್ದರೆ ಅವರಿಗೆ ಸಮಾನರಾದ ಬಂಧುಗಳು, ಹಿತ-ಚಿಂತಕರು ಜಗತ್ತಿನಲ್ಲಿ ಯಾರೂ ಇಲ್ಲ.

ಆ ಮೇಲೆ ಸತ್ಯೇಂದ್ರ ಆಗಾಗ್ಗೆ ತನ್ನ ಹಿಂದಿನ ಮಾತುಗಳನ್ನು ನಳಿನಿಗೆ ಹೇಳುತ್ತಿದ್ದ. ಇಬ್ಬರೂ ಇದೇ ಬಗೆಯ ಮಾತುಗಳಲ್ಲಿ ಮಗ್ನರಾಗಿ ಹೇಳುತ್ತ ಕೇಳುತ್ತ ಕುಳ್ಳಿರುತ್ತಿದ್ದರು. ಅನೇಕ ರಾತ್ರಿಗಳು ಹೀಗೆಯೆ ಕಳೆಯುತ್ತಿದ್ದುವು. ಸತ್ಯೇಂದ್ರನೊಬ್ಬನೇ ಮಾತುಗಳನ್ನಾಡುತ್ತಿದ್ದನಷ್ಟೇ ಅಲ್ಲ, ನಳಿನಿಯು ಆಗ್ರಹದಿಂದ–ಕುತೂಹಲದಿಂದ ಪತಿಯ ಪೂರ್ವ ಪ್ರೇಮದ ಮಾತುಗಳನ್ನು ಕೇಳುತ್ತಿದ್ದಳು— ಆಲಿಸುತ್ತಿದ್ದಳು.

೫

ಎರಡು ವರ್ಷಗಳು ಕಳೆದುವು, ಈಗ ನಳಿನಿ ಹದಿನೆಂಟು ವರ್ಷದ ಯೌವನೆ. ಈಗ ಮೊದಲಿನಷ್ಟು ಕಷ್ಟ ಆಕೆಗಿಲ್ಲ. ಗಂಡ ಈಗ ಆಕೆಯ ಅನಾದರ ಮಾಡುತ್ತಿಲ್ಲ. ಪತಿಯ ಪ್ರೀತಿಯನ್ನು ಬಲಾತ್ಕಾರದಿಂದ

ಪಡೆದಿರುವಳು. ಬಲಾತ್ಕಾರದಿಂದ ಪಡೆಯಲು ಬಲ್ಲವರು ಅದನ್ನು ಇಟ್ಟು
ಕೊಳ್ಳಲೂ ಬಲ್ಲರು. ಈಗ ಯಾವ ಕಷ್ಟವೂ ಆಕೆಗೆ ಇಲ್ಲ ಸತ್ಯೇಂದ್ರ
ಈಗ ಪಬನಾ ಪಟ್ಟಣದ ಡೆಪ್ಯುಟಿ ಮ್ಯಾಜಿಸ್ಟ್ರೇಟ. ಹೆಂಡತಿಯ ಜತನ,
ಸೇವಾಭಾವ ಮತ್ತು ಏಕಾಗ್ರ ಪ್ರೇಮದಿಂದ ಅವನಲ್ಲಿ ಬಹಳ ಪರಿವರ್ತನೆ-
ಯಾಗಿರುವುದು. ಅವನು ಕಚೇರಿಯ ಕೆಲಸವನ್ನು ಮುಗಿಸಿಕೊಂಡ
ಬಳಿಕ ನಳಿನಿಯೊಡನೆ ಹರಟೆ ಹೊಡೆಯುವ, ತಮಾಷೆ ಮಾಡುವ,
ಹಾಡು-ಬಾರಿಸುವಿಕೆಯನ್ನು ಕೇಳಿ ಆನಂದಪಡುವ. ಒಂದೇ ವಾಕ್ಯದಲ್ಲಿ
ಹೇಳುವುದಾದರೆ ಸತ್ಯೇಂದ್ರ ಈಗ ಮನುಷ್ಯನಾಗಿರುವ. ಮನುಷ್ಯನಿಗೆ
ಸಿಗದೆ ಇದ್ದ ವಸ್ತುವು ಅತ್ಯಂತ ಪ್ರಿಯವಾಗುವುದು. ಮಾನವನ
ಚರಿತ್ರೆಯೇ ಹೀಗೆ. ನೀವು ಅಶಾಂತಿಯಲ್ಲಿ ಇರುವಿರಿ, ಶಾಂತಿಯನ್ನು
ಅರಸುತ್ತ ತಿರುಗುವಿರಿ;— ನಾನು ಶಾಂತಿಯಿಂದ ಇರುವೆ, ಆದಾಗ್ಯೂ
ಎಲ್ಲಿಂದಲೊ ಅಶಾಂತಿಯನ್ನು ಜಗ್ಗಿ ತಂದುಕೊಳ್ಳುತ್ತಿರುವೆ.

ಛಲವನ್ನು ಹಿಡಿಯುವುದು ಮನುಷ್ಯನ ಸ್ವಭಾವಸಿದ್ಧ ಭಾವ,
ಹುಟ್ಟು ಗುಣ. ಓಡಿಹೋಗುವ ಮೀನವು ದೊಡ್ಡದಾಗುವುದೇ ?
ಸತ್ಯೇಂದ್ರನೂ ಮನುಷ್ಯ. ಮನುಷ್ಯನ ಸ್ವಭಾವ-ಹುಟ್ಟು ಗುಣ ಎಲ್ಲಿಗೆ
ಹೋಗುವುದು ? ಇಷ್ಟು ಪ್ರೀತಿ, ಇಷ್ಟು ಸೇವೆ, ಇಷ್ಟು ಶಾಂತಿಯಲ್ಲಿಯೂ
ಸತ್ಯೇಂದ್ರನ ಹೃದಯದಲ್ಲಿ ಆಗಾಗ್ಗೆ ಗುಡುಗು-ಸಿಡಿಲು-ಮಿಂಚು ಗರ್ಜಿಸು
ವುವು—ಹೊಳೆಯುವುವು. ಒಂದು ಕ್ಷಣಮಾತ್ರದಲ್ಲಿ ಅವನ ಮನದಲ್ಲಿ
ಅಲ್ಲೋಲಕಲ್ಲೋಲವಾಗುವುದು; ಕ್ರಾಂತಿಯ ಕಿಡಿ ಹೊತ್ತುವುದು.
ಆಗ ಅದನ್ನು ಶಾಂತಪಡಿಸಲು ನಳಿನಿಯು ಸಾಕಷ್ಟು ಪರಿಶ್ರಮ ಮಾಡ
ಬೇಕಾಗುವುದು. ಒಮ್ಮೊಮ್ಮೆ ಆಕೆಗೆ ಹೇಗೆ ಸಂಬಾಳಿಸಬೇಕೆಂಬುದೇ
ತಿಳಿಯದಾಗುವುದು. ಬಹುಶಃ ತಾನು ಪಟ್ಟ ಪರಿಶ್ರಮ, ಜತನ,
ಪ್ರಯತ್ನ ಎಲ್ಲವೂ ಎಲ್ಲಿ ವ್ಯರ್ಥವಾಗಿ ಹೋಗುವುದೊ ಎಂಬ ಭಯ
ಆಕೆಗೆ. ನಳಿನಿಯು ಕಿಂಚಿತ್ತಾದರೂ ತಪ್ಪು ಮಾಡಿದರೆ ಸತ್ಯೇಂದ್ರನಿಗೆ
'ಸರಳೆಯಾಗಿದ್ದರೆ ಹೀಗೆ ಮಾಡುತ್ತಿರಲಿಲ್ಲ' ಎಂದು ಎನಿಸುವುದು.
ಅವನು ಯೋಚಿಸಿದಂತೆ ಆಗುತ್ತಿತ್ತೊ' ಇಲ್ಲವೊ ದೇವರೇ ಬಲ್ಲ—

ಬಹುಶಃ ಆಗುತ್ತಿರಲಿಲ್ಲ, ಇದಕ್ಕೂ ನಾಲ್ಕು ಪಟ್ಟು ಆಕೆಯಿಂದಲೂ ತಪ್ಪು ಆಗಬಹುದಾಗಿದ್ದಿತು! ಆದರೆ ಇದರಿಂದೇನು? ಆ ಮೀನವು ಓಡಿಹೋಗಿರುವುದಲ್ಲ! ಸತ್ಯೇಂದ್ರ ಇನ್ನೂ ಸರಳೆಯನ್ನು ಮರೆತಿಲ್ಲ. ಕಚೇರಿಯಿಂದ ಮನೆಗೆ ಬಂದಕೂಡಲೇ ನಳಿನಿಯು ಕಾಣಿಸದಿದ್ದರೆ ತೀರಿತು, 'ನಳಿನಿಯೆಲ್ಲಿ, ಸರಳೆಯೆಲ್ಲಿ!' ಎಂದು ಯೋಚಿಸುವ.

ನಳಿನಿಯು ಅತ್ಯಂತ ಜಾಣೆಯು. ಆಕೆಯು ಯಾವಾಗಲೂ ಪತಿಯ ಬಳಿಯಲ್ಲಿರುವಳು. ಏಕೆಂದರೆ 'ಅವರು' ಸರಳೆಯನ್ನು ಮರೆತಿಲ್ಲವೆಂಬುದು ಆಕೆಗೆ ಗೊತ್ತಿರುವುದು. ಸಂಪೂರ್ಣವಾಗಿ ಸರಳೆಯನ್ನು ಗಂಡನು ಮರೆತು ಬಿಟ್ಟರೆ ಒಳ್ಳೆಯದು ಎಂಬ ವಿಚಾರವೂ ನಳಿನಿಗೆ ಬಂದಿಲ್ಲ. ಆದರೆ, ವ್ಯರ್ಥವಾಗಿ ಆಕೆಯನ್ನು ನೆನೆದುಕೊಂಡು ಕಷ್ಟಪಡುತ್ತಿರುವರಲ್ಲ ಎಂದು ಯಾವಾಗಲೂ ನಳಿನಿಯು ಪತಿಯ ಬಳಿಯಲ್ಲೇ ಇರುವಳು. ಆಕೆಯನ್ನು ಮರೆಯದಿದ್ದರೂ ಪರವಾ ಇಲ್ಲ, ತನ್ನನ್ನು ಮಾತ್ರ ಅನಾದರಿಸುವುದಿಲ್ಲ ಎಂಬ ಮಾತು ನಳಿನಿಗೆ ಗೊತ್ತಾಗಿರುವುದು; ತನಗಿಷ್ಟೆ ಸಾಕು ಎಂದು ಆಕೆಯು ಸಮಾಧಾನದಿಂದ ಇರುವಳು.

ಗೋಪೀಕಾಂತ ರಾಯ್ ಅವರು ಸಬನಾದ ಪ್ರತಿಷ್ಠಿತ ವಕೀಲರೊಬ್ಬರು. ಕಲಕತ್ತೆಯಲ್ಲಿ ಅವರ ಮನೆ ನಳಿನಿಯ ಮನೆಯ ಬಳಿಯಲ್ಲೆ ಇರುವದು. ಯಾವುದೋ ದೂರದ ಸಂಬಂಧವಿರುವುದರಿಂದ ನಳಿನಿಯು ಅವರನ್ನು 'ಕಾಕಾ' ಎಂದು ಕೂಗುವಳು. ಅವರ ಹೆಂಡತಿಯನ್ನು 'ಕಕ್ಕಿ' ಎಂದು ಕೂಗುವಳು. ಕಕ್ಕಿ ಆಕೆಯ ಮನೆಗೆ ಆಗಾಗ್ಗೆ ಬರುವಳು. ಗೋಪೀ ಅವರೂ ಆಗಾಗ್ಗೆ ಬಂದುಹೋಗುವರು. ಊರಿನವರ ದೃಷ್ಟಿಯಿಂದ ಈ ಇಬ್ಬರನ್ನೂ ಸತ್ಯೇಂದ್ರ ಉಚ್ಚ ಸ್ಥಾನದಲ್ಲಿ ನೋಡುವ. ಸತ್ಯೇಂದ್ರನ ಮನೆ ಸ್ವಲ್ಪ ದೂರವಿದ್ದರೂ ಈ ಮನೆತನ್ನಗಳಲ್ಲಿ ಸಾಕಷ್ಟು ಸ್ನೇಹ ಬೆಳೆದಿರುವುದು.

ನಳಿನಿಯೂ ಆಗಾಗ್ಗೆ ಕಾಕಾನ ಮನೆಗೆ ಹೋಗಿಬರುವಳು. ಕಾಕಾನ ಮನೆಯು ಮತ್ತು ಅವರ ಮಗಳಾದ ಹೇಮಾನೊಡನೆ ಸಾಕಷ್ಟು

ಸ್ನೇಹ ಆಗಿ ಹೋಗಿರುವುದು. ಬಾಲ್ಯದ ಸಖಿ ಹೇಮಾ; ಒಬ್ಬರು ಇನ್ನೊಬ್ಬರನ್ನು ಬಿಟ್ಟು ಇರಲಾರರು. ಆ ದಿನ ಹನ್ನೆರಡು ಬಾರಿಸಿದ್ದುವು. ಸತ್ಯೇಂದ್ರ ಕಚೇರಿಗೆ ಹೋಗಿಬಿಟ್ಟಿದ್ದ. ಯಾವ ಕೆಲಸವೂ ಇಲ್ಲದ್ದರಿಂದ ನಳಿನಿಯು ಚಿತ್ರ ತೆಗೆಯಲು ಕುಳಿತಳು. ಆದರೆ, ಅದೇ ವೇಳೆಗೆ ಗಡಗಡ ಶಬ್ದ ಮಾಡುತ್ತ ಒಂದು ಗಾಡಿಯು ಡಿಪ್ಟೀ ಸಾಹೇಬರ ಮನೆಯ ಎದುರಿಗೆ ಬಂದು ನಿಂತಿತು.

'ಯಾರು ಬಂದರು? ಹೇಮಾ ಇರಬಹುದು!" ಬಹಳ ಯೋಚಿಸಬೇಕಾಗಲಿಲ್ಲ. ಬಹಳ ಕೋಲಾಹಲ ಮಾಡುತ್ತ ಹೇಮಾಂಗಿನಿ ಬಂದುಬಿಟ್ಟಳು. ಆಕೆಯು ನಳಿನಿಯ ಕೂದಲ ಹಿಡಿದು "ಇನ್ನು ಚಿತ್ರ ಬರೆಯುವುದು ಅಗತ್ಯವಿಲ್ಲ, ನಮ್ಮ ಮನೆಗೆ ನಡೆ. ನಿನ್ನ ಅಣ್ಣನ ಹೆಂಡತಿ ಬಂದಿರುವಳು." ಎಂದಳು.

"ನಿನ್ನ ಅತ್ತಿಗೆ ಬಂದಿದ್ದರೆ, ಆಕೆಯನ್ನು ಕರೆದುಕೊಂಡೇಕೆ ಬರಲಿಲ್ಲ?"

"ಅದು ಹೇಗೆ ಆಗಬಲ್ಲದು? ಹೊಸಹೊಸದಾಗಿ ಬಂದಿರುವಳು. ಒಮ್ಮೆಗೇ ನಿನ್ನ ಮನೆಗೆ ತಾನೇ ಹೇಗೆ ಬಂದಾಳು?"

"ನಾನೇಕೆ ಹೋಗಬೇಕು ಹಾಗಾದರೆ?'

"ನೀನಂತೂ ಬಂದೇ ಬರುವಿ. ನಾನು ನಿನ್ನನ್ನು ಎಳೆದು ಕೊಂಡು ಹೋಗುವೆ." ಎಂದು ಹೇಮಾಂಗಿನಿ ನಕ್ಕು ನುಡಿದಳು.

ಕೂದಲು ಹಿಡಿದು ಎಳೆದುಕೊಂಡು ಹೊರಟರೆ ನಳಿನಿಯ ಯೋರ್ವಗಳೇ ಏಕೆ? ಎಲ್ಲರೂ ಹೋಗಬೇಕಾಗುವುದು ನಳಿನಿಯು ಹೋಗಲೇ ಬೇಕಾಯಿತು.

ನಳಿನಿಗೆ ಹೇಮಾಂಗಿನಿಯ ಮನೆಗೆ ಹೋಗಲು ಮನಸ್ಸಿರಲಿಲ್ಲ. ಏಕೆಂದರೆ ಅಲ್ಲಿಗೆ ಹೋದರೆ ಮನೆಗೆ ಹಿಂತಿರುಗಿ ಬರಲು ತಡವಾಗು ವುದು. ಹಿಂದೆ ಒಂದೆರಡು ದಿನ ಹೀಗೆ ಆಗಿರುವುದು ಮತ್ತು ನಳಿನಿಯು ತಿರುಗಿ ಬರುವ ಮುಂಚೆಯೆ ಸತ್ಯೇಂದ್ರ ಕಚೇರಿಯಿಂದ ಮನೆಗೆ ಬಂದು

ಬಿಟ್ಟಿರುನ. ಇಂತಹ ಸ್ಥಿತಿಯಲ್ಲಿ ಸತ್ಯೇಂದ್ರನಿಗೆ ಬಹಳ ಕಷ್ಟವಾಗು ವುದು. ಅವನು ಏನನಾದರೂ ತಿಳಿದುಕೊಳ್ಳಲಿ ಬಿಡಲಿ, ಆದರೆ ನಳಿನಿಗೆ ಮಾತ್ರ ನಾಚಿಕೆಯಾಗುವುದು. ಏಕೆಂದರೆ ತನ್ನ ಕೈಯಿಂದ ಗಾಳಿ ಹಾಕಿಸಿಕೊಳ್ಳದಿದ್ದರೆ ಸತ್ಯೇಂದ್ರನ ಉಷ್ಣತೆಯು ದೂರಾಗುವುದಿಲ್ಲ ಎಂಬುದು ನಳಿನಿಗೆ ಗೊತ್ತಿದ್ದ ವಿಷಯ. ದೇವರ ಇಚ್ಛೆ— ನಳಿನಿಯು ಎಷ್ಟು ಪ್ರಯತ್ನಿಸಿದರೂ ಈ ದಿನ ಆಕೆಗೆ ಸಾಯಂಕಾಲ ಏಳು ಗಂಟೆಯ ಒಳಗಾಗಿ ಹಿಂತಿರುಗಿ ಮನೆಗೆ ಬರಲಾಗಲಿಲ್ಲ. ಮನೆಗೆ ಬಂದು ಆಕೆಯು ನೋಡಿದಳು— ಸತ್ಯೇಂದ್ರ ವರ್ತಮಾನಪತ್ರ ಓದುತ್ತಿದ್ದ. ಇದುವರೆಗೆ ಅವನು ಏನನ್ನೂ ತಿಂದಿಲ್ಲ-ಕುಡಿದಿಲ್ಲ. ಅವನಿಗೆ ತಿನ್ನಿಸುವ ಚಹಾ ಮಾಡಿಕೊಡುವ ಭಾರ ನಳಿನಿಯ ಕೈಯಲ್ಲೆ ಇದ್ದಿತು. ಬಳಿಗೆ ಹೋದ ಬಳಿಕ ಸತ್ಯೇಂದ್ರ ನಕ್ಕ. ಆದರೆ ಆ ನಗುವು ನಳಿನಿಗೆ ಸರಿ ಬರಲಿಲ್ಲ. ಆಕೆಯು ಒಳಗಿಂದೊಳಗೇ ನಡುಗಿದಳು. ಆಸನವನ್ನು ಹಾಸಿ ಫಲಾಹಾರದ ಸಿದ್ಧತೆಯನ್ನು ಮಾಡಿದಳು. ಆದರೆ, ಸತ್ಯೇಂದ್ರ ಏನನ್ನೂ ಮುಟ್ಟಲಿಲ್ಲ— ಎಳ್ಳಷ್ಟೂ ಹಸಿವು ಇಲ್ಲ. ಎಷ್ಟು ಹೇಳಿದರೂ ಬೇಡಿ ಕೊಂಡರೂ ಅವನು ಏನನ್ನೂ ತಿನ್ನಲಿಲ್ಲ. ಅದೇಕೆ ಇಷ್ಟು ಕೋಪ ಬಂದಿರುವುದು ಎಂಬುದನ್ನು ನಳಿನಿಯು ತಿಳಿದುಕೊಂಡಳು.

೬

ಈ ದಿನ ಹೇಮಾಂಗಿನಿಯು ತನ್ನ ಅತ್ತೆ-ಮನೆಗೆ ಹೋಗುವಳು. ಆಕೆಯ ಗಂಡ ಉಪೇಂದ್ರಬಾಬೂ ಅವರು ಆಕೆಯನ್ನು ಕರೆಯಲು ಬಂದಿರುವರು. ಬಹಳ ದಿನಗಳಿಂದ ನಳಿನಿಯು ಹೇಮಾಂಗಿನಿಯನ್ನು ಕಾಣಲು ಹೋಗಿರಲಿಲ್ಲ. ಆದುದರಿಂದ ಹೇಮಾಂಗಿನಿಯು ಬಹಳ ಆಗ್ರಹದಿಂದ ಬರಲು ಬರೆದು ಕಳುಹಿರುವಳು.

ಗಂಡನ ಅಪ್ಪಣೆಯನ್ನು ಪಡೆಯದೆ ತಾನು ಎಲ್ಲಿಗೂ ಹೋಗುವು ದಿಲ್ಲವೆಂದು ನಳಿನಿಯು ಪ್ರತಿಜ್ಞೆಯನ್ನು ಮಾಡಿದ್ದಳು. ಈ ದಿನ ತನ್ನ ಪ್ರತಿಜ್ಞೆಯಂತೆ ಆಕೆಯು ನಡೆದುಕೊಂಡರೆ ಆಕೆಯ ಪ್ರೀತಿಯ ಗೆಳತಿಯು

ಭೇಟಿ ಇನ್ನು ಆಗುವುದಿಲ್ಲ. ನಳಿನಿಯು ಧರ್ಮಸಂಕಟದಲ್ಲಿ ಬಿದ್ದಳು. ಮೂರು ಗಂಟೆಯ ಗಾಡಿಯಿಂದ ಹೋಗುವುವೆಂದು ಹೇಮಾ ಬರೆದಿದ್ದಳು. ಆಗ ಗಂಡನ ಅಪ್ಪಣೆ ಪಡೆಯುವುದೆಂತು? ಅನೇಕ ಕುತರ್ಕಗಳನ್ನು ಮಾಡಿ ನಳಿನಿಯು ಹೊರಡುವ ನಿಶ್ಚಯ ಮಾಡಿದಳು. ಹೋಗುವ ಮುನ್ನ ದಾಸಿಗೆ ನಮ್ಮ ಗಾಡಿಯು ರಾಯಬಾಬೂಗಳ ಮನೆಗೆ ಸರಿಯಾಗಿ ಮೂರು ಗಂಟೆಗೆ ತಲ್ಪಬೇಕು ಎಂದು ಹೇಳಿದಳು. ಆದರೆ ಆ ದಿನ ಮೂರು ಗಂಟೆಯ ವೇಳೆಗೆ ಹೇಮಾಂಗಿನಿಗೆ ಹೊರಡುವುದಾಗಲಿಲ್ಲ. ಆದುದರಿಂದ ಆಕೆಯು ಬಿಡಲೇ ಇಲ್ಲ ನಳಿನಿಯನ್ನು. ಹೆಚ್ಚು ಆಗ್ರಹ ಮಾಡಿದರೂ ಆಕೆಯು ನಿಲ್ಲದೆ ತಿರುಗಿ ಬರಬೇಕಾಗಿದ್ದಿತು, ಆದರೆ ಆಕೆಗೆ ಬರಲಾಗಲಿಲ್ಲ. ಎಷ್ಟು ದಿನಗಳ ನಂತರ ಹೇಮಾಂಗಿನಿಯ ಭೇಟಿಯಾಗುವುದೊ ಏನೊ. ಬಹಳ ದಿನ ಇನ್ನು ಆಕೆಯು ಬರಲಾರಳು. ಅದಕ್ಕಾಗಿ ಏನು ಮಾಡುವುದು ?

ತಿರುಗಿ ಹೋಗಲು ತಡವಾದರೆ ಪತಿದೇವರು ಕೋಪಿಸಿಕೊಳ್ಳುವರು ಎಂದು ಹೇಳಲು ನಳಿನಿಗೆ ನಾಚಿಕೆ. ಇಂತಹ ಮಾತನ್ನು ಸಹಜವಾಗಿ ಯಾರು ಹೇಳಬಯಸುವರು ? ಇಷ್ಟು ಹೀನತೆಯನ್ನು ಸ್ವೀಕರಿಸುವವರು ಯಾರು ? ವಿಶೇಷತಃ ಈ ವಯಸ್ಸಿನಲ್ಲಿ ! ಕೊನೆಗೆ ಈ ಮಾತನ್ನು ಸಹ ಆಕೆಯು ಹೇಳಿಯೆ ಬಿಟ್ಟಳು, ಆದರೆ ಹೇಮಾಂಗಿನಿಗೆ ಈ ಮಾತಿನ ಮೇಲೆ ನಂಬಿಕೆಯುಂಟಾಗಲಿಲ್ಲ. ಆಕೆಯು ನಕ್ಕು “ ನಾನು ಮೂರ್ಖಳೆಂದು ತಿಳಿಯಬೇಡ. ಕೋಪ—ಗೀಪದ ಮಾತನ್ನು ನಾನು ಸರಿಯಾಗಿ ಬಲ್ಲೆ. ಉಪೇಂದ್ರ ಬಾಬೂಗಳಿಗೂ ಕೋಪಿಸಿಕೊಳ್ಳುವುದು ಗೊತ್ತಿರುವುದು. ” ಎಂದಳು.

ಹೀಗೆ ಮಾತುಮಾತಿನಲ್ಲಿಯೆ ನಕ್ಕು ಹೇಮಾಂಗಿನಿಯು ನಳಿನಿಯ ಮಾತನ್ನು ಹಾರಿಸಿಬಿಟ್ಟಳು. ಆದರೆ ನಳಿನಿಗೆ ಇದರಿಂದ ಅಸಹ್ಯ ವೇದನೆಯು ಎದೆಯಲ್ಲಿ ಮಿಡಿಯತೊಡಗಿತು. ಎಲ್ಲ ಹೆಂಗುಸುರ ಗಂಡಂದಿರೆಲ್ಲರೂ ಒಂದೇ ಎರಕದಲ್ಲಿ ಹೊಯ್ದವರು ಇರುವರೆ ? ಸರ್ವರೂ ಉಪೇಂದ್ರ ಬಾಬುಗಳಂತೆ ಇರುವರೆ ?

ನಳಿನಿಯು ರಾತ್ರಿ ಮನೆಗೆ ಬಂದಾಗ ಹತ್ತು ಬಾರಿಸಿದ್ದುವು. ಸತ್ಯೇಂದ್ರ ಬಾಬುಗಳು ಹೊರಗೆ ಮಲಗಿರುವರು ಎಂಬ ಸಂಗತಿಯನ್ನು ಕೇಳಿದಳು!

ಮಾತಂಗಿನಿ ನಳಿನಿಯ ತವರುಮನೆಯ ದಾಸಿ. ಆಕೆಯು ನಳಿನಿಯನ್ನು ಹೆಚ್ಚಾಗಿ ಪ್ರೀತಿಸುವಳು. ಆದುದರಿಂದ ಆಕೆಯು ನಳಿನಿಗೆ ಚೆನ್ನಾಗಿ ಕಠೋರ ನುಡಿಗಳನ್ನಾಡಿದಳು. ಸತ್ಯೇಂದ್ರ ಅತ್ಯಂತ ಕೋಪಗೊಂಡು ಹೊರಗೆ ಹಾಸುಗೆಯನ್ನು ಹಾಸಲು ಆಜ್ಞೆಯನ್ನಿತ್ತಿರುವನೆಂದು ಆಕೆಗೊಬ್ಬಳಿಗೇ ಗೊತ್ತಿದ್ದಿತು.

ಗಂಭೀರ ರಾತ್ರಿ. ಸತ್ಯೇಂದ್ರ ಕಣ್ಣು ಮುಚ್ಚಿಕೊಂಡು ಹಿಂದಿನ ಸ್ಮೃತಿಗಳನ್ನು ಪುನಃ ಜಾಗ್ರತಗೊಳಿಸಲು ಯತ್ನಿಸತೊಡಗಿದ. ಬಹಳ ದಿನಗಳಿಂದ ಮಾಯವಾದ ಅರಳಿದ ಕಮಲದಂತೆ ಇರುವ ಸರಳೆಯ ಮುಖದ ಕೂಡ ನಳಿನಿಯ ಮುಖವು ಹೋಲುವುದೊ ಇಲ್ಲವೊ ಎಂಬುದನ್ನು ಅವನು ವಿಚಾರ ಮಾಡುತ್ತಿದ್ದ. ಸರಳೆಯ ಪ್ರೇಮದ ಮುಂದೆ ನಳಿನಿಯ ಪ್ರೇಮವು ಸೂರ್ಯನ ಮುಂದೆ ಮಿಂಚುಬುಳುವಿದ್ದಂತೆ, ಸಾಗರದ ಮುಂದೆ ಗೋಷ್ಪದದ ನೀರು ಇದ್ದಂತೆ. ಈ ಬಗೆಯಲ್ಲಿ ವಿಚಾರದ ಬಿರುಗಾಳಿ ಬೀಸತೊಡಗುವುದಿದ್ದಿತು. ಇಷ್ಟರಲ್ಲಿ ನಳಿನಿಯು ಬಾಗಿಲು ತೆರೆದು ಕೋಣೆಯನ್ನು ಹೊಕ್ಕಳು. ಸತ್ಯೇಂದ್ರ ಕತ್ತೆತ್ತಿ ನೋಡಿದ—ನಳಿನಿ. ಆಕೆಯು ಅವನ ಪಾದದ ಬಳಿಗೆ ಬಂದು ಕುಳಿತಳು. ಸತ್ಯೇಂದ್ರ ಕಣ್ಣು ಮುಚ್ಚಿಕೊಂಡ. ಎಷ್ಟೋ ಹೊತ್ತು ಹೀಗೆಯೆ ಕಳೆಯಿತು. ಇದನ್ನು ಕಂಡು ಸತ್ಯೇಂದ್ರ ಸಿಟ್ಟಾದ. ಅವನು ಮುಗ್ಗಲಾಗಿ ಪುರುಷಭಾವದಲ್ಲಿ ಸ್ಪಷ್ಟವಾಗಿ ಎಂದ " ಇಲ್ಲೇಕೆ ನೀನು ? "

ನಳಿನಿಯು ಅಳುತ್ತಿದ್ದಳು; ಮಾತು ಬರಲಿಲ್ಲ ಬಾಯಿಗೆ. ಆಕೆಯು ಅಳುವುದನ್ನು ಕೇಳಿ ಡಿಪ್ಟಿ ಸಾಹೇಬರು ಇನ್ನಿಷ್ಟು ಕೋಪಿಸಿ " ರಾತ್ರಿ ಸಾಕಷ್ಟಾಗಿದೆ, ಹೋಗು. ಒಳಗೆ ಹೋಗಿ ಮಲಗಿಕೊ " ಎಂದರು.

ನಳಿನಿಯು ಅಳುತ್ತಿದ್ದಳು. ಆಕೆ ಕಂಬನಿಗಳನ್ನೊರಸಿಕೊಳ್ಳುತ್ತ " ನೀವು ನಡೆಯಿರಿ ಮಲಗಿಕೊಳ್ಳಲು ! " ಎಂದಳು.

"ನನಗೆ ನಿದ್ರೆ ಬರುತ್ತಿರುವುದು. ಈಗ ಏಳಲಾರೆ."

ಅತ್ತರೆ ಸತ್ಯೇಂದ್ರನಿಗೆ ಬಹಳ ಸಿಟ್ಟು! ಈಗ ನಳಿನಿಯು ತನ್ನ ಕಂಬನಿಗಳನ್ನು ಒರೆಸಿಕೊಂಡಳು. ಪತಿಯ ಎದುರಿಗೆ ಇನ್ನು ಆಕ ಅಳುವುದಿಲ್ಲ. ಮೆಲ್ಲಗೆ ಪಾದದ ಮೇಲೆ ಕೈಯಿಟ್ಟು ಆಕೆಯೆಂದಳು "ಈ ಬಾರಿ ನನ್ನನ್ನು ಕ್ಷಮಿಸಿಬಿಡಿರಿ. ನಿಮಗೆ ಇಲ್ಲಿ ಬಹಳ ಕಷ್ಟವಾಗು ವುದು, ಒಳಗೆ ನಡೆಯಿರಿ."

ಇನ್ನು ತಾನು ಒಳಗೆ ಹೋಗುವುದಿಲ್ಲವೆಂದು ಸತ್ಯೇಂದ್ರ ಪ್ರತಿಜ್ಞೆ ಮಾಡಿರುವ! ಅವನೆಂದ "ಇಷ್ಟು ರಾತ್ರಿಯಾದ ಬಳಿಕ ಕಷ್ಟದ ಮಾತನ್ನು ಯೋಚಿಸಬೇಕಾಗಿಲ್ಲ; ನೀನು ಹೋಗಿ ಮಲಗಿಕೊ, ನಾನೂ ಮಲಗುವೆ."

ನಳಿನಿಗೆ ಸತ್ಯೇಂದ್ರನ ಸ್ವಭಾವ ಗೊತ್ತಿದ್ದಿತು. ಆಕೆಯು ತನ್ನ ಕೋಣೆಗೆ ಹೋಗಿ ಇಡಿ ರಾತ್ರಿಯನ್ನು ಅಳುತ್ತ ಕಳೆದಳು. ಎಲ್ಲಿಗೆ ಹೋದಳು ಹೇಮಾಂಗಿನಿ ? ಒಂದು ಬಾರಿ ಬಂದು ನೋಡಿ ಹೋಗುವು ದಿಲ್ಲೇಕೆ? ಸಿಟ್ಟಿನ ವಿಷಯ ಬಲ್ಲಳಂತೆ, ಹೇಗೆ ಈ ಜಗಳವನ್ನು ತೀರಿಸುವಳು ?

ಮರುದಿನವೂ ಸತ್ಯೇಂದ್ರ ಒಳಗೆ ಬರಲಿಲ್ಲ ಅಥವಾ ಮರುದಿನ ತನ್ನ ಮುಖವನ್ನು ತೋರಿಸಲಿಲ್ಲ.

ನಳಿನಿಯು ಒಂದು ಕಾಗದ ಬರೆದು ಮಾತಂಗಿನಿಯು ಕೂಡ ಕಳುಹಿದಳು. ಸತ್ಯೇಂದ್ರ ಅದನ್ನು ಓದದೆ ಹರಿದು ಚೂರು ಚೂರು ಮಾಡಿ ಬಿಸಾಡಿ ನುಡಿದ "ಇದನ್ನೆಲ್ಲ ನೀನು ಮಾಡಬೇಡ ಇನ್ನು."

ನಾಲ್ಕೈದು ದಿನಗಳ ನಂತರ ನಳಿನಿಯ ಅಣ್ಣ ನರೇಂದ್ರಬಾಬೂ ಪಬನಾಕ್ಕೆ ಬಂದ. ಅಕಸ್ಮಾತ್ ಬಂದ ಅಣ್ಣನನ್ನು ನೋಡಿ ನಳಿನಿಗೆ ಸಂತೋಷವಾಯಿತು. ಆದರೆ, ಆಕೆಗೆ ಸಂತೋಷಕ್ಕಿಂತಲೂ ವಿಸ್ಮಯವೇ ಹೆಚ್ಚಾಗಿ ಆಯಿತು.

"ಅಣ್ಣ, ಇದೇನು ? ಬಂದ ಕಾರಣ ?"

ನರೇಂದ್ರ ಬಾಬೂ ನಳಿನಿಯನ್ನು ಕಂಡು ನಗುತ್ತ "ಮನೆಗೆ ಹೊರಡಲು ನೀನಿಷ್ಟು ಉತ್ಸುಕ ಏಕೆ ಆಗಿರುವೆ ತಂಗೀ?" ಎಂದ.

"ಉತ್ಸುಕ?"

ಈ ಮಾತಿನ ಅರ್ಥವನ್ನು ಆಗಲೇ ಆಕೆಯು ಅರಿತುಕೊಂಡಳು. ಆಕೆಯು ನಗುತ್ತ "ನಿಮ್ಮೆಲ್ಲರನ್ನು ಬಹಳ ದಿನಗಳಿಂದ ನೋಡಿಲ್ಲ ವಲ್ಲ!" ಎಂದಳು.

೭

ನಳಿನಿಯು ತನ್ನ ಅಣ್ಣನ ಕೂಡ ತನ್ನ ಗಂಡನಿಗೆ ನಮಸ್ಕಾರ ಮಾಡಿ ತನ್ನ ತಾಯ ಊರಿಗೆ ಹೊರಟು ಹೋದ ದಿನ ಸತ್ಯೇಂದ್ರನಿಗೆ ಇಡಿ ರಾತ್ರಿ ನಿದ್ರೆಯೆ ಬರಲಿಲ್ಲ. ಅವನು ಇಡಿ ರಾತ್ರಿ ಯೋಚಿಸುತ್ತಲೇ ಇದ್ದ. ಯೋಚಿಸದೆ ಇದ್ದರೆ ನಡೆಯುವಂತಿದ್ದಿತು. ಬಹಳ ಹೊತ್ತಿನ ವರೆಗೆ ಅವನ ಮನದಲ್ಲಿ ಒಂದೇ ಮಾತು ಬರುತ್ತಿದ್ದಿತು— ಇನ್ನೂ ಸಮಯವಿದೆ, ಗಾಡಿಯನ್ನು ಹಿಂತಿರುಗಿಸಿ ಕರೆದುಕೊಂಡು ಬರಬಹುದು. ಆದರೆ, ಅಯ್ಯೋ ಅಭಿಮಾನವೆ! ಅದರ ಕಾರಣದಿಂದಲೇ ನಳಿನಿಯನ್ನು ಹಿಂತಿರುಗಿ ಕರೆಯಿಸಿಕೊಳ್ಳಲಾಗಲಿಲ್ಲ.

ಹೋಗುವಾಗ ಮಾತಂಗಿನಿಯೂ ಜೊತೆಗೆ ಹೋದಳು. ಆಕೆಯೊಬ್ಬಳು ಮಾತ್ರ ಈ ಬಿಳ್ಕೊಡುವುದರ ರಹಸ್ಯವನ್ನು ಅರಿತವಳಾಗಿದ್ದಳು. ಮನೆಯಲ್ಲಿ ಈ ಮಾತನ್ನು ಎತ್ತಲೇಕೂಡದೆಂದು ನಳಿನಿಯು ಮಾತಂಗಿನಿಗೆ ಹೇಳಿಬಿಟ್ಟಿದ್ದಳು. ಈ ಮಾತನ್ನು ಪ್ರಕಟಗೊಳಿಸಿದರೆ ಗಂಡನ ಕೀರ್ತಿಗೆ ಕಲಂಕ ಹಚ್ಚಿದಂತೆ ಎಂದು ಆಕೆಯು ತಿಳಿದುಕೊಂಡಿದ್ದಳು. ಒಳ್ಳೆಯವರೇ ಇರಲಿ, ಕೆಟ್ಟವರೇ ಇರಲಿ, ತನ್ನ ಪತಿಯು ಕೆಟ್ಟವನು ಎಂದು ಹೇಳಲು ಅವರು ಯಾರು?

ತವರುಮನೆಗೆ ಹೋಗಿ ನಳಿನಿಯು ತಂದೆ-ತಾಯಂದಿರ ಅಡಿಗೆ ಎರಗಿದಳು; ತಮ್ಮನನ್ನು ಎತ್ತಿಕೊಂಡಳು; ಎಲ್ಲವನ್ನೂ ಮಾಡಿದಳು.

ಆದರೆ ಒಂದನ್ನು ಮಾತ್ರ ಮಾಡಲಿಲ್ಲ. ಏನೆಂದರೆ ನಗಲಿಲ್ಲ. ನಗುವು ಆಕೆಯ ಮುಖದ ಮೇಲೆ ಸುಳಿಯಲೇ ಇಲ್ಲ.

ತಾಯಿಯೆಂದಳು. "ನನ್ನ ನಳಿನಿ ಒಂದೇ ದಿನ ಗಾಡಿಯಲ್ಲಿ ಪ್ರವಾಸ ಮಾಡಿದುದರಿಂದ ದಣಿದು ಹೋಗಿರುವಳು; ಮುಖವು ಬಾಡಿ ಹೋಗಿರುವುದು."

ಆದರೆ ಆ ಒಣಗಿದ ಮುಖ ಪುನಃ ಅರಳಲಿಲ್ಲ.

ಒಂದು ಚಿಕ್ಕ ಕಾರಣದಿಂದ ಒಂದು ದೊಡ್ಡ ಅನಿಷ್ಟವಾಗುವುದು ಈ ಜಗತ್ತಿನಲ್ಲಿ ಆಗಾಗ್ಗೆ ಕಂಡುಬರುವುದು. ಸೂರ್ಪಣಖೆಯ ಚಿತ್ತ ಚಾಂಚಲ್ಯವು ಸುವರ್ಣ-ಲಂಕೆಯ ನಾಶಕ್ಕೆ ಕಾರಣವಾಯಿತು. ಒಂದು ಸಾಮಾನ್ಯ ರೂಪದ ಮೋಹಕ್ಕೆ ಟ್ರಾಯ್ ನಗರವು ಹಾಳಾಗಿ ಹೋಗಬೇಕಾಯಿತು. ಒಂದು ಸಾಧಾರಣ ಕಾರಣದಿಂದ ರಾಜಾ ಹರಿಶ್ಚಂದ್ರನು ಕಷ್ಟಕ್ಕೆ ಈಡಾಗಬೇಕಾಯಿತು. ಪ್ರಪಂಚದಲ್ಲಿ ಇಂತಹ ದೃಷ್ಟಾಂತಗಳಿಗೇನೂ ಕೊರತೆಯಿಲ್ಲ. ಇಲ್ಲಿಯೂ ಒಂದು ಸಾಮಾನ್ಯ ಕಾರಣವು ಸಂಕಟವನ್ನು ತಂದೊಡ್ಡಿತು. ಸತ್ಯೇಂದ್ರನಿಗೇನು ದೋಷ ಕೊಡುವುದು!

ನಳಿನಿಯು ಎಂದೂ ಅಭಿಮಾನವನ್ನು ತಾಳಲಿಲ್ಲ. ಪತಿಯ ಕಷ್ಟವನ್ನು ನೋಡಿ ನೋಡಿ ಎಲ್ಲವನ್ನೂ ಸಹಿಸುತ್ತಿದ್ದಳು. ಆದರೆ ಅದನ್ನು ಈಗ ಆಕೆಗೆ ಸಹಿಸುವುದಾಗಲಿಲ್ಲ. ಆಕೆಯು ಯೋಚಿಸಿದಳು— ಇಷ್ಟು ಚಿಕ್ಕ ಕಾರಣಕ್ಕಾಗಿ ತಾನು ಪತಿಯಿಂದ ತ್ಯಜಿಸಲ್ಪಟ್ಟರೆ ತಾನು ಬದುಕಿ ಉಳಿಯುವುದಾದರೂ ಏತಕ್ಕಾಗಿ? ತಾನೇಕೆ ಸತ್ತುಹೋಗಬಾರದು?

ಭೀಷಣ ಅಭಿಮಾನದಿಂದ ನಳಿನಿಯು ಕೊರಗತೊಡಗಿದಳು, ಒಣಗತೊಡಗಿದಳು. ಅತ್ತ ಸತ್ಯೇಂದ್ರನ ಅಭಿಮಾನ ಇಲ್ಲದಾಗಿರುವುದು. ಒಂದು ಗಳಿಗೆಯಾದರೂ ನಳಿನಿಯನ್ನು ಬಿಟ್ಟಿರದ ಸತ್ಯೇಂದ್ರನ ಒಣ ಅಭಿಮಾನ ಎಷ್ಟು ದಿನ ಬದುಕೀತು? ಅಭಿಮಾನವು ಘೋರ ಕಷ್ಟಕ್ಕೆ ಕಾರಣವಾಗಿರುವುದು. ಸತ್ಯೇಂದ್ರ ದಿನಾಲು ದಾರಿ ನೋಡುವ. ಬಹುಶಃ ಈ ದಿನ ಪತ್ರ ಬರಬಹುದೆಂದು ದಾರಿ ನೋಡುವ, 'ಬಂದು

ಕರೆದುಕೊಂಡು ಹೋಗಿರಿ' ಎಂದು ಕಾಗದದಲ್ಲಿ ಬರೆಯಬಹುದು ಎಂದು ಯೋಚಿಸುವ. ಈ ಬಾರಿ ಆಕೆಯನ್ನು ಕರೆದುಕೊಂಡು ಬಂದ ಮೇಲೆ ಈ ರೀತಿಯಾಗಿ ಆಕೆಯ ಕೂಡ ವ್ಯವಹರಿಸುವುದಿಲ್ಲ ಎಂದು ವಿಚಾರ ಮಾಡುವ. ಆದರೆ, ಆದರೇನು? ಹಣೆಯಲ್ಲಿ ಬರೆದುದನ್ನು ಯಾರು ಅಳಿಸುವರು? ಆಗಬೇಕಾದುದು ಆಗಿಯೆ ತೀರುವುದು. ನಾನು ಮತ್ತು ನೀವು ಕ್ಷುದ್ರ ಪ್ರಾಣಿಗಳು ಮಾತ್ರ. ಇನ್ನೊತ್ತು ನಾಳೆಯೆಂದು ಆರು ತಿಂಗಳುಗಳು ಕಳೆದುಹೋದುವು. ದುರ್ಭಾಗ್ಯವುಳ್ಳಾಕೆಯು ಒಂದು ಕಾಗದವನ್ನೂ ಬರೆಯಲಿಲ್ಲ. ಪಾಪಿಷ್ಠ ಸತ್ಯೇಂದ್ರನಾಥ ಕೊರಗ ತೊಡಗಿದ, ಆದರೆ ಬಾಗಲಿಲ್ಲ, ಜಗ್ಗಲಿಲ್ಲ. ಆರು ತಿಂಗಳುಗಳು ಹಾಗೆಯೆ ಕಳೆದುವು. ಈ ಅವಧಿಯು ಸತ್ಯೇಂದ್ರನ ತಾಳ್ಮೆಯನ್ನು ಕದಡಿತು. ಕಾಣದಾದ ಅಭಿಮಾನವು ಪುನಃ ಜಾಗ್ರತವಾಯಿತು. ಅದಕ್ಕೆ ಸಿಟ್ಟು ಬಂದು ಸೇರಿತು. ಅವನು ಹಿತಾಹಿತ–ಜ್ಞಾನ–ಶೂನ್ಯನಾಗಿ ಬಿಟ್ಟ. ಅವನಿಗೆ ಅವನ ದೋಷವು ಕಾಣಲಿಲ್ಲ. ಯಾರಲ್ಲಿ ಇಷ್ಟು ಅಹಂಕಾರವಿದೆಯೊ ಅವರೊಡನೆ ಅಷ್ಟೇ ಸೇಡನ್ನೂ ತೀರಿಸಿಕೊಳ್ಳ ಬೇಕು ಎಂದು ಯೋಚಿಸತೊಡಗಿದ.

ಯಾರಿಗೂ ತಮ್ಮ ತಮ್ಮ ದೋಷವು ಕಾಣಲಿಲ್ಲ. ಆರೆಬರೆತ ಎರಡೂ ಹೃದಯಗಳು ಬೇರೆ ಬೇರೆಯಾಗತೊಡಗಿದುವು. ಯೌವನದ ಪ್ರಾರಂಭಕಾಲದಲ್ಲಿ ಸಂಕುಚಿತ ಲತೆಗೆ ನೀರುಣಿಸಿ ಯಾರು ಬೆಳೆಯಿಸಿದ್ದರು? ಆದರೆ, ಈಗ ಸಹಿಸುವುದಾಗುವುದಿಲ್ಲ, ಈಗ ಮುರಿಯುವ— ಹರಿಯುವ ಹೊತ್ತು ಬಂದಿರುವುದು.

ಸತ್ಯೇಂದ್ರನಾಥ! ನಿನಗೆ ದೋಷ ಕೊಡುವುದಿಲ್ಲ, ಆಕೆಗೂ ದೋಷ ಕೊಡಲು ಬರುವುದಿಲ್ಲ. ಇಬ್ಬರೂ ತಪ್ಪು ಮಾಡಿರುವಿರಿ— ದೋಷ ಮಾಡಿಲ್ಲ— ಅಪರಾಧ ಮಾಡಿಲ್ಲ. ತಪ್ಪನ್ನು ತೋರಿಸಿಕೊಟ್ಟಿದ್ದರೆ ಆತ್ಮಗ್ಲಾನಿಯು ಯಾರಿಗೆ ಹೆಚ್ಚಾಗುತ್ತಿತ್ತೊ! ಅದನ್ನು ದೇವರೇ ಬಲ್ಲ. ನಮಗೂ ಅದು ತಿಳಿಯದು, ನಿಮಗೂ ತಿಳಿಯದು. ಯಾವ ಸಾಧ್ಯವನ್ನು ಸಾಧಿಸಲಿಕ್ಕೆ, ಯಾವ ಬಯಕೆಯನ್ನು ಈಡೇರಿಸಿಕೊಳ್ಳಲಿಕ್ಕೆ ನೀವು ಇಷ್ಟೆಲ್ಲ ಮಾಡಿದಿರಿ!

ನಿಮ್ಮ ಬಯಕೆ ಈಡೇರದು, ಅದನ್ನು ಈಡೇರಿಸುವ ಇಚ್ಛೆಯೂ ಇಲ್ಲ. ನಿಮ್ಮ ಇಚ್ಛೆಯೇನು ? ಅದೂ ಚೆನ್ನಾಗಿ ತಿಳಿಯದು. ಆದಾಗ್ಯೂ ಕಾತರ ಹೃದಯವು ಆವುದೊ ಒಂದು ಅತೃಪ್ತ ಆಕಾಂಕ್ಷೆಯಿಂದ ಪ್ರತಿ ಗಳಿಗೆಗೂ ಹಾಹಾಕಾರ ಮಾಡುವುದು. ಆ ಹೃದಯದಲ್ಲಿ ಏನಾಗುವುದು, ಹೀಗೇಕೆ ಈ ಬಗೆಯ ಕಾಣದ ಗತಿಯು ಹುಟ್ಟುವುದು ಎಂಬುದರ ನಿರ್ಣಯವನ್ನು ಮಾಡಬರುವುದಿಲ್ಲ.

ಆಗಬೇಕಾದುದು ಆಗಲೇಬೇಕು, ಆಗಿಯೆ ಆಗುವುದು. ಇಚ್ಛೆಯು ಇದ್ದಾಗ್ಯೂ ಮನದೊಡನೆ ಮಲ್ಲಯುದ್ಧ ಮಾಡಿದಾಗ್ಯೂ—ನಿನ್ನನ್ನು ಆ ಅಪರಾಧದಿಂದ ಬಿಡುಗಡೆ ಮಾಡುವೆ. ಮಾಡುವೆನೇನು ?

೮

ಅತ್ಯಂತ ರೂಪವತಿಯಾದ ಹುಡುಗೆಯೊಡನೆ ಸತ್ಯೇಂದ್ರನ ಮದುವೆ ಆಯಿತು. ಆದಾಗ್ಯೂ ಆಕೆಯು ಅವನ ಮನಸ್ಸಿಗೆ ಬರಲಿಲ್ಲ ! ಗೃಹಿಣಿಗೆ ಅತ್ಯಂತ ದುಃಖ. ಚಂದ್ರನಂತೆ ಮುಖವುಳ್ಳವಳು ಬಂದರೂ ಮನೆತನವು ಸರಿಯಾಗಿ ಸಾಗಲಿಲ್ಲ ಎಂದು ಉದಾಸೀನಳಾಗತೊಡಗಿದಳು. ತಾಯಿಯು ನೂರಾರು ರೀತಿಯಿಂದ ಹೇಳಿದರೂ ಮಗನಿಗೆ ನೆಮ್ಮದಿಯಿಲ್ಲ. ಇನ್ನು ಉಪಾಯವಾದರೂ ಏನಿದೆ ? 'ಮಗನಿಗೆ ಹುಡುಗೆಯು ಮನಸ್ಸಿಗೆ ಬರದಿದ್ದರೆ ಸೊಸೆಯೇತಕ್ಕೆ ? ಮಗನ ಆದರ ಇದ್ದರೆ ಸೊಸೆಯ ಆದರ, ಸ್ವತಃ ತಾನೇ ನೋಡಿ ಮದುವೆ ಮಾಡಿಕೊಂಡರೆ ನಾನೇನು ತಡೆಯುವೆನೆ ? ' ಎಂದು ಅನ್ನುತ್ತ ಆಕೆಯು ತನ್ನ ಅಭ್ಯಾಸಾನುಸಾರವಾಗಿ 'ವರಣಮಾಲೆ' ಯನ್ನು ಸಿದ್ಧಗೊಳಿಸುತ್ತ ಕುಳಿತುಕೊಂಡಳು.

ಎರಡು ವರುಷಗಳ ಹಿಂದೆಯೆ ಹರದೇವಬಾಬುಗಳ ದೇಹಾಂತವಾಗಿರುವುದು. ಆ ಮಾತು ನೆನಪಿಗೆ ಬಂದಿತು—ಕಣ್ಣುಗಳಲ್ಲಿ ನೀರು ಬಂದುವು; ಪುನಃ ನಳಿನಿಯ ನೆನಪು ಬಂದಿತು; ಕಂಬನಿಗಳ ವೇಗವು ಹೆಚ್ಚಾಯಿತು. ಎಂತಹ ಸೊಸೆ ಬರುವಳೊ ಏನೊ ? ಸತ್ಯೇಂದ್ರನ

ತಂದೆಯವರು ಜೀವಿಸಿದ್ದರೆ ಆಕೆಯು ಈ ದುರ್ಗತಿಯನ್ನು ನೋಡ ಬೇಕಾಗುತ್ತಿರಲಿಲ್ಲ.

ಸತ್ಯೇಂದ್ರ ಮದುವೆ ಮಾಡಿಕೊಂಡು ಬಂದ. ತಾಯಿಯು ಅವ-ರಿಬ್ಬರಿಗೆ ತಾನು ಹೆಣೆದ 'ವರಣ-ಮಾಲೆ'ಯನ್ನು ಹಾಕಿ ಮನೆತುಂಬಿಸಿ ಕೊಂಡಳು. ಒಣಗಿದ ಕಣ್ಣುಗಳು ಮತ್ತೆ ಒದ್ದೆಯಾದವು. ಕಂಬನಿ ಗಳನ್ನು ಒರೆಸಿಕೊಳ್ಳುತ್ತ ಆಕೆಯೆಂದಳು "ಕಣ್ಣಲ್ಲಿ ಏನೋ ಬಿದ್ದಿದೆ, ಅದಕ್ಕಾಗಿ ಆಗಾಗ್ಗೆ ನೀರು ಬರುತ್ತವೆ."

ಗಿರಿಬಾಲಾ ಒಡಕು-ಬಾಯಿಯ ಹುಡುಗೆ, ವಿಶೇಷವಾಗಿ ನಳಿನಿ ಯೊಡನೆ ಆಕೆಯ ಸಂಬಂಧ ಸಹೋದರಿಯಂತೆ ಇದ್ದಿತು. ಆಕೆಯೆಂದು ಬಿಟ್ಟಳು "ಈ ವಯಸ್ಸಿನಲ್ಲಿ ಮೂರು ಬಾರಿ ಆಗಿಹೋಯಿತು, ಇನ್ನೂ ಎಷ್ಟು ಬಾರಿ ಏನೇನು ಆಗುವುದೊ ಯಾರಿಗೆ ಗೊತ್ತು ?"

ಈ ಮಾತನ್ನು ತಾಯಿಯು ಕೇಳಿದಳು, ಸತ್ಯೇಂದ್ರನ ಕಿವಿಯ ವರೆಗೂ ಈ ಮಾತು ಹೋಯಿತು. ನಾಳೆ ಸೌಭಾಗ್ಯದಿನ.

ಅದೆಲ್ಲಿಂದಲೊ ವಿಜೃಂಭಣೆಯಿಂದ ಸೌಭಾಗ್ಯದ ವಸ್ತುಗಳು ಹೇರಳವಾಗಿ ಬಂದಿರುವುವು. ಅವುಗಳಲ್ಲಿ ವಧೂವರರಿಗೂ ಡಾಕಾದ ಸೀರೆ-ಧೋತರ ಮುಂತಾದ ಬೆಲೆಯುಳ್ಳ ವಸ್ತುಗಳು ಇರುವುವು. ಮದುಮಗಳಿಗೆ ಒಂದು ಬನಾರಸಿ ಸೀರೆಯೂ ಬಂದಿರುವುದು. ಅದರ ಕಿಮ್ಮತ್ತು ಕೂಡ ಅಷ್ಟಿಷ್ಟು ಇರಲಿಕ್ಕಿಲ್ಲ. ಅಂತಹ ಸೀರೆ ಈ ಊರಿಗೆ ಯಾರ ಮನೆಗೂ ಬಂದಿಲ್ಲ. ಈ ಊರವರು ಯಾರೂ ಅಂತಹ ಸೀರೆ ಯನ್ನು ಈಮೊದಲು ಕಂಡಿಲ್ಲ. ಎಲ್ಲರೂ ಕೇಳುತ್ತಿರುವರು--"ಎಲ್ಲಿಂದ ಬಂದಿವೆ ಕಾಣಿಕೆಗಳು ?" ಎಂದು. ತಾಯಿ ದುಗುಡವನ್ನು ನುಂಗಿ ಕೊಳ್ಳುತ್ತ "ಸತ್ಯೇಂದ್ರನ ಮಿತ್ರನೊಬ್ಬನು ಕಳುಹಿಸಿರುವ" ಎಂದು ಹೇಳಿಬಿಡುತ್ತಿರುವಳು.

ತಾಯಿಯು ಒತ್ತಡದಿಂದ ಬರುತ್ತಿರುವ ಕಂಬನಿಗಳನ್ನು ಗುಟ-ಕರಿಸಿ ನಿಜ ಸಂಗತಿಯನ್ನು ಬಚ್ಚಿಡುತ್ತ ನಗುತ್ತ, ಅಳುಮೊಗದಿಂದ ಸೌಭಾಗ್ಯದ ಕಾಲದಲ್ಲಿ ಹಂಚುವ ಮಿಠಾಯಿಯನ್ನು ಹಂಚಿಸಿದಳು.

ಎಲ್ಲ ಹೆಂಗಳೆಯರೂ ತಮ್ಮ ತಮ್ಮ ಭಾಗವನ್ನು ತೆಗೆದುಕೊಂಡು ಮನೆಗೆ ಹೋದರು. ಹೋಗುವಾಗ ರಾಜಬಾಲೆಯು ಎಂದಳು "ಒಳ್ಳೆಯ ಸೌಭಾಗ್ಯದ ವಸ್ತುಗಳು!" ನೃತ್ಯಕಾಳಿಯು "ಅಲ್ಲದೆ ಮತ್ತೇನು? ದೊಡ್ಡವರ ಮನೆಗೆ ಇಂತಹ ದೊಡ್ಡ ಒಳ್ಳೆಯ ವಸ್ತುಗಳೇ ಬರುವುವು!"

ಕ್ರಮೇಣವಾಗಿ ಈ ರೀತಿಯ ಮಾತುಗಳು ಮುಗಿದ ನಂತರ ಯೋಗಮಾಯೆಯು ಎಂದಳು "ಒಳ್ಳೇದು, ಮತ್ತೊಮ್ಮೆ ಮದುವೆ ಯನ್ನೇಕೆ ಮಾಡಿಕೊಂಡರು?" ಜ್ಞಾನದಾ ಎಂದಳು "ಯಾರಿಗೆ ಗೊತ್ತು? ಎಷ್ಟು ಒಳ್ಳೆಯ ರೂಪವತಿ ಗುಣವತಿ ಇದ್ದಳು ನಳಿನಿ! ಏನೊ ಏನೊ, ಯಾವುದೂ ತಿಳಿಯದು."

ರಾಮಮಣಿಯು ಹಜಾಮರ ಹುಡುಗಿಯು. ಆಕೆಯ ಸ್ಥಿತಿ ಚೆನ್ನಾಗಿರುವುದು. ಆಕೆಯು ನೋಡುವುದಕ್ಕೂ ಚೆನ್ನಾಗಿರುವಳು. ಆದರೆ ಮೂಗು ಮಾತ್ರ ಸ್ವಲ್ಪ ಮೊಂಡು. ಕೆಲವರು ಹೊಟ್ಟೆಕಿಚ್ಚಿನ ಹೆಂಗಳೆಯರು ಆಕೆಯ ಕಣ್ಣುಗಳಲ್ಲಿಯೂ ದೋಷವಿರುವುದೆಂದು ಹೇಳು ವರು. ಅವರೆನ್ನುವರು "ಆನೆಯ ಕಣ್ಣುಗಳಿಗಿಂತಲೂ ಚಿಕ್ಕ ಕಣ್ಣುಗಳು ಆಕೆಯವು."

ಇರಲಿ, ಈ ನಿಂದೆಯ ಮಾತುಗಳಿಂದೇನು ನಮಗೆ? ರಾಮ-ಮಣಿಯು ಸ್ವಲ್ಪ ನಕ್ಕು ನುಡಿದಳು "ನಿಮ್ಮ ಮಿದುಳಿನಲ್ಲಿ ಸ್ವಲ್ಪ ಬುದ್ಧಿ ಇದ್ದಿದ್ದರೆ ಇಂತಹ ಮಾತುಗಳನ್ನಾಡುತ್ತಿದ್ದಿರಾ? ಆಕೆಯು ಯಾವಾ ಗಲೂ ಕೂಗಿ ಕೂಗಿ ನಕ್ಕು ನಕ್ಕು ಮಾತನಾಡುತ್ತಿದ್ದಳು. ಆಕೆಯು ಗಹಗಹಿಸಿ ನಗುವುದು ಸ್ವಲ್ಪ ಸಂದೇಹವನ್ನು ಉಂಟುಮಾಡುತ್ತಿದ್ದಿತು. ಆಕೆಯ ಸ್ವಭಾವ-ನಡತೆ ಚೆನ್ನಾಗಿರಲಿಲ್ಲರೇ, ಚೆನ್ನಾಗಿರಲಿಲ್ಲ. ಇಲ್ಲದಿದ್ದರೆ ಈ ರೀತಿಯಾಗಿ ಹೊರಗೆ ಹಾಕುತ್ತಿದ್ದರೇನು? ಮತ್ತೊಂದು ಮದುವೆ ಮಾಡಿಕೊಳ್ಳುತ್ತಿದ್ದರೇನು?"

ಬಾಯಿಂದ ಯಾರೂ ನುಡಿಯದಿದ್ದರೂ ಎಲ್ಲರ ಅಭಿಪ್ರಾಯ ಮತ್ತು ಈ ರಾಮಮಣಿಯ ಮಾತಿನ ಅರ್ಥ ಒಂದೇ ಆದುವು.

ಒಂದೆರಡು ದಿನಗಳ ನಂತರ ಇಡಿ ಊರವರಿಗೆ ರಾಮುಮಣಿಯು ಜಮೀನುದಾರರ ಮನೆಯ ರಹಸ್ಯವನ್ನು ಅರಿತುಕೊಂಡಿರುವಳೆಂದು ಗೊತ್ತಾಯಿತು. ಹಜಾಮರ ಹುಡುಗೆಯಾಗಿರದಿದ್ದರೊ ಇಷ್ಟು ಬುದ್ಧಿ ಇರುತ್ತಿದ್ದಿತೇನು ಆಕೆಯಲ್ಲಿ? ಬ್ರಾಹ್ಮಣ, ಕಾಯಸ್ಥ ಹುಡುಗೆಯರಲ್ಲಿಯೂ ಇಷ್ಟು ಬುದ್ಧಿ ಸಿಕ್ಕುವುದು ಅಪರೂಪವಾಗಿದೆ ಈ ದಿನಗಳಲ್ಲಿ. ಈ ಮಾತನ್ನು ಎಲ್ಲರೂ ಒಪ್ಪಿಕೊಂಡರು.

ಈಗ ಸತ್ಯೇಂದ್ರನ ತಾಯಿಯ ಬಾರಿ. ಈ ಮಾತು ಆಕೆಯ ಕಿವಿಗೆ ಮುಟ್ಟಿದ ಮೇಲೆ ಆಕೆಯು ತನ್ನ ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಒಮ್ಮೆಗೇ ಭೂಮಿಯ ಮೇಲೆ ಬಿದ್ದು ಹೊರಳಾಡ ತೊಡಗಿದಳು— ನನ್ನ ನಳಿನಿಯು ಕುಲಟೆಯೆ! ಅದೇಕೊ ಏನೊ ಸರಳೆಗಿಂತಲೂ ಆಕೆಯು ನಳಿನಿಯನ್ನು ಹೆಚ್ಚು ಪ್ರೀತಿಸತೊಡಗಿದ್ದಳು. ಆಜೀವನ ಪರ್ಯಂತ ನಳಿನಿಯ ಭಾಗ್ಯ ಒಡೆದು ಹೋಗಿದ್ದಿತು. ಸತ್ಯೇಂದ್ರ ಆಕೆಯನ್ನು ತನ್ನ ಮನೆಯಲ್ಲಿ ಇಟ್ಟುಕೊಂಡರೆ ಸರಿ, ಇಲ್ಲದಿದ್ದರೆ ಆಕೆಯನ್ನು ಜೊತೆಯಲ್ಲಿ ಇಟ್ಟುಕೊಂಡು ತಾನು ಕಾಶಿಯಲ್ಲಿ ಇರುವೆನೆಂದು ಸತ್ಯೇಂದ್ರನ ತಾಯಿ ಮನದೊಳಗೆ ಯೋಚಿಸಿದಳು. ಆ ದುರ್ಭಾಗ್ಯಳ ಈ ಜನ್ಮದ ಆಸೆ-ಆಕಾಂಕ್ಷೆಗಳು ಎಲ್ಲವೂ ನಸಿಸಿದುವು.

ಆಗ ತಾಯಿಯು ತನ್ನ ಕೋಣೆಯ ಬಾಗಿಲನ್ನು ತೆರೆದು ಮಾತಂಗಿನಿಯನ್ನು ಒಳಗೆ ಕರೆದು ಬಾಗಿಲು ಹಾಕಿಕೊಂಡಳು. ಮಾತಂಗಿನಿಯೇ ಸೌಭಾಗ್ಯದ ವಸ್ತುಗಳನ್ನು ತಂದಿದ್ದಳು.

ಇಬ್ಬರಲ್ಲಿಯೂ ಸಾಕಷ್ಟು ಕಂಬನಿಗಳ ವಿನಿಮಯವಾಯಿತು. ಯಾವ ರೀತಿಯಾಗಿ ನಳಿನಿಯ ಬಂಗಾರದಂತಹ ಸಂಸಾರ, ಚಿನ್ನದಂತಹ ಆಕೆಯ ಮೈಬಣ್ಣ ಕಪ್ಪಾಯಿತು, ಆಕೆಯ ಯಾವ ಅಪರಾಧಕ್ಕಾಗಿ ಸತ್ಯೇಂದ್ರ ಆಕೆಯನ್ನು ತ್ಯಜಿಸಿದ, ಎಷ್ಟು ಕರುಣಾಪೂರಿತವಾದ ವಚನಗಳಿಂದ ಅತ್ತೆಗೆ ನಮಸ್ಕಾರ ಹೇಳಿಕಳಿಸಿರುವಳು ಇತ್ಯಾದಿಗಳ ವರ್ಣನೆಯನ್ನು ವಿಸ್ತಾರವಾಗಿ ಮಾತಂಗಿನಿಯು ಕಂಬನಿಗಳನ್ನು ಒರೆಸಿ-ಕೊಳ್ಳುತ್ತ ನಿವೇದಿಸಿದಳು. ಕೇಳುತ್ತ ಕೇಳುತ್ತ ಸತ್ಯೇಂದ್ರನ ತಾಯಿಯ

ಮೊದಲಿನ ಸ್ನೇಹವು ನೂರ್ಮಡಿಯಾಗಿ ಬೆಳೆಯಿತು, ಮಗನ ಮೇಲೆ ಭೀಷಣ, ದಾರುಣ ಅಭಿಮಾನವು ಉತ್ಪನ್ನವಾಯಿತು. ಆಕೆಯು ಮನದಲ್ಲಿಯೇ ಯೋಚಿಸತೊಡಗಿದಳು— ನಾನು ಸತ್ಯೇಂದ್ರನಿಗೆ ಏನೂ ಆಗಬಾರದೇ? ನನ್ನ ಮಾತುಗಳು ತಿರಸ್ಕಾರಕ್ಕೆ ಯೋಗ್ಯವಾಗಿವೆಯೆ? ನನ್ನ ಒಂದೂ ಮಾತು ನಡೆಯಲಾರದೇ? ನಾನು ಪುನಃ ನಳಿನಿಯನ್ನು ಮನೆಗೆ ಕರೆದುಕೊಂಡು ಬರುವೆ. ನನ್ನ ಲಕ್ಷ್ಮಿಗೆ ಈ ದೆಸೆಯೆ?

ಅದೇ ದಿನ ತಾಯಿಯು ಮಗನನ್ನು ಕರೆದು "ನಳಿನಿಯನ್ನು ಕರೆದುಕೊಂಡು ಬಾ" ಎಂದು ಹೇಳಿದಳು.

ಮಗನು ತಲೆಯಲ್ಲಾಡಿಸಿ "ಇಲ್ಲ" ಎಂದ.

ತಾಯಿಯು ಅತ್ತು "ಏನೋ, ನನ್ನ ನಳಿನಿಯ ಹೆಸರನ್ನು ಊರಲ್ಲೆಲ್ಲ ಕಲಂಕಿತ ಮಾಡಿರುವರು, ನೀನು ಆಕೆಯ ಗಂಡ—ಆಕೆಯ ಮರ್ಯಾದೆಯನ್ನು ಉಳಿಸುವುದಿಲ್ಲವೇ!" ಎಂದಳು.

''ಯಾವ ಕಲಂಕ?''

''ಈ ರೀತಿಯಾಗಿ ಹೊರಗೆ ಹಾಕಿ ಬೇರೆ ಮದುವೆ ಮಾಡಿಕೊಳ್ಳುತ್ತಿರುವಿ. ಇದಕ್ಕೆ ಯಾವ ಕಲಂಕ ಎನ್ನಬೇಕು? ನಾನು ಏನೆಂದು ಹೇಳಿ ಜನರ ಬಾಯನ್ನು ಮುಚ್ಚಲಿ?''

"ಬಾಯ ಮುಚ್ಚುವುದರಿಂದೇನಾಗುವುದು?"

"ಹಾಗಾದರೆ, ಕರೆದುಕೊಂಡು ಬರುವುದಿಲ್ಲೇನು?"

"ಇಲ್ಲ."

ತಾಯಿಗೆ ಬಹಳ ಸಿಟ್ಟು ಬಂದಿತು. ಯಾವ ರೀತಿಯ ಸಿಟ್ಟು ಮಾಡಬೇಕು, ಯಾವ ಮಾತುಗಳನ್ನಾಡಬೇಕು ಎಂಬುದನ್ನು ಆಕೆಯು ಮೊದಲೇ ನಿಶ್ಚಯಿಸಿಕೊಂಡು ಬಂದಿದ್ದಳು. ಆದುದರಿಂದ ಆಕೆಗೆ ಯೋಚನೆಯನ್ನು ಮಾಡಬೇಕಾಗಲಿಲ್ಲ. ಆಕೆಯೆಂದಳು "ಹಾಗಾದರೆ, ನನ್ನನ್ನು ನಾಳೆಯೇ ಕಾಶಿಗೆ ಕಳಿಸಿಬಿಡು. ನಾನಿಲ್ಲಿ ಒಂದು ಕ್ಷಣ ಕೂಡ ಇರಲಾರೆ."

ಸತ್ಯೇಂದ್ರ ಈಗ ಮೊದಲಿನ ಸತ್ಯೇಂದ್ರನಾಗುಳಿಯಲಿಲ್ಲ. ಸರಳೆಯ ಆದರ್ಶ ಧನನಾಗಿ; ಆಟದ ವಸ್ತುವಾಗಿ; ಪ್ರೀತಿಯ ಒಡವೆಯಾಗಿ; ಅನ್ಯಮನಸ್ಕ, ಉಚ್ಚ ಮನಸ್ಸಿನ, ಸರಳ ಹೃದಯದ, ಪ್ರಫುಲ್ಲ ಮೊಗದ ಪತಿಯಾಗಿ; ನಳಿನಿಯ ಅನೇಕ ಜತನ ಮತ್ತು ಕ್ಲೇಶದ ವಸ್ತುವಾಗಿ ಸತ್ಯೇಂದ್ರ ಉಳಿಯಲಿಲ್ಲ. ಅವನು ತನ್ನ ಎದೆಯ ಮೇಲೆ ಕಲ್ಲನ್ನು ಇಟ್ಟುಕೊಂಡಿರುವ; ನಾಚಿಕೆ ಹಿತಾಹಿತಜ್ಞಾನ ಎಲ್ಲವನ್ನೂ ಕಳೆದು ಕೊಂಡಿರುವ. ಅವನು ಅನಾಯಾಸವಾಗಿ "ನಿನ್ನ ಮನಸ್ಸು ಬಂದಲ್ಲಿಗೆ ಹೋಗಿಬಿಡು. ನಾನು ಇನ್ನು ಯಾರನ್ನೂ ಕರಕೊಂಡು ಬರುವುದಿಲ್ಲ" ಎಂದ.

ಸತ್ಯೇಂದ್ರನ ಬಾಯಿಯಿಂದ ಇಂತಹ ಮಾತನ್ನು ಕೇಳಬೇಕಾದೀ-ತೆಂಬುದನ್ನು ಆಕೆಯು ಸ್ವಪ್ನದಲ್ಲಿಯೂ ಯೋಚಿಸಿರಲಿಲ್ಲ. ಆಕೆಯು ಅಳುತ್ತ ಹೊರಟು ಹೋದಳು. ಹೋಗುವಾಗ ಎನ್ನುತ್ತ ಹೋದಳು "ನನ್ನ ಸೊಸೆ ಕುಲಟೆಯಲ್ಲ, ಇದನ್ನು ನೀನು ಚನ್ನಾಗಿ ಅರಿತುಕೋ. ಊರಿನ ಜನರು ಬೇಕಾದುದನ್ನು ಹೇಳಲಿ, ನನಗೆ ಅವರ ಮಾತಿನ ಮೇಲೆ ಎಳ್ಳಷ್ಟೂ ವಿಶ್ವಾಸವಿಲ್ಲ."

ಮರುದಿನ ಅತ್ತೆಯು ಬಂದು, ಸತ್ಯೇಂದ್ರನನ್ನು ಕೂಗಿ ಕರೆದು "ನಿನ್ನ ಗೆಳೆಯನೊಬ್ಬನು ನಿನಗೆ ಸೌಭಾಗ್ಯದ ವಸ್ತುಗಳ್ನು ಕಳಿಸಿರುವನು ನೋಡಿರುವೆಯಾ?" ಎಂದು ಕೇಳಿದಳು.

ಸತ್ಯೇಂದ್ರನು ತಲೆಯಲ್ಲಾಡಿಸಿ "ಇಲ್ಲವಲ್ಲ! ಯಾವ ಗೆಳೆಯ?" ಎಂದ.

"ಗೊತ್ತಿಲ್ಲ! ಕುಳಿತುಕೊ, ಎಲ್ಲ ಬಟ್ಟೆಗಳನ್ನು ತರುವೆ!"

ಸ್ವಲ್ಪ ಹೊತ್ತಿನನಂತರ ಅತ್ತೆಯು ಬಟ್ಟೆಗಳ ಗಂಟನ್ನು ತಂದಳು. ಬಹಳ ಬೆಲೆಯುಳ್ಳ ಬಟ್ಟೆಗಳು. ಸತ್ಯೇಂದ್ರ ಅವನ್ನು ನೋಡಿದ, ಆಶ್ಚರ್ಯಚಕಿತನಾದ. ಯಾವ ಗೆಳೆಯನು ಕಳಿಸಿರುವ? ಬನಾರಸಿ ಸೀರೆಯನ್ನು ನೋಡುತ್ತ ಕುಳಿತಿರುವಾಗ ಅವನ ಲಕ್ಷ್ಯವು ಅದರ

ಸೆರಗಿನ ಚುಂಗಿನ ಕಡೆಗೆ ಹೋಯಿತು. ಆ ಚುಂಗಿನಲ್ಲಿ ಏನೋ ಕಟ್ಟಲ್ಪಟ್ಟಿದ್ದಿತು. ಬಿಚ್ಚಿ ನೋಡಿದ ಸತ್ಯೇಂದ್ರ. ಒಂದು ಪತ್ರವಿದ್ದಿತು ಅದರಲ್ಲಿ.

ಹಸ್ತಾಕ್ಷರವನ್ನು ನೋಡಿದ ಕೂಡಲೆ ಅವನ ಹಣೆಗೆ ಕರಾರಿಯನ್ನು ಇರಿದಂತಾಯಿತು!

ಅದರಲ್ಲಿ ಬರೆದಿದ್ದಿತು—

" ಸೋದರಿ, ಸ್ನೇಹದ ಕಾಣಿಕೆಯನ್ನು ತಿರುಗಿ ಕಳಿಸಬಾರದು. ನಿನ್ನ ಜೀಜೀಯು ಕಳಿಸಿರುವಳು. ಅದನ್ನು ಸ್ವೀಕರಿಸಬೇಕು. "

× × × ×

ಆ ಸೌಭಾಗ್ಯ ರಾತ್ರಿಯ ದಿನ ಹಾಸಿದ ಹೂವಿನ ಹಾಸುಗೆಯು ಸತ್ಯೇಂದ್ರನಿಗೆ ಮುಳ್ಳಿನ ಹಾಸುಗೆಯಾಯಿತು.

೯

ಯುವಕನ ಅಭಿಮಾನವನ್ನು ಯಾವನಾದರೂ ಬಾಲಕನಲ್ಲಿ ಕಂಡಿರುವಿರಾ? ಸತ್ಯೇಂದ್ರನಂತೆ ಅಭಿಮಾನ ತಾಳುತ್ತ ಇಷ್ಟು ದೊಡ್ಡ ಅನರ್ಥ ಮಾಡುವ ಯಾವ ಬಾಲಕನನ್ನಾದರೂ ಕಂಡಿರುವಿರಾ? ಬಾಲ್ಯದಲ್ಲಿ ಪುಸ್ತಕ ತೆಗೆದುಕೊಂಡು ಆಡುತ್ತಿದ್ದೆ, ಆಗ ತಂದೆಯವರು ಅದಕ್ಕಾಗಿ ಶಿಕ್ಷೆಯನ್ನು ವಿಧಿಸಿದ್ದರು, ಅದನ್ನು ನಾನು ಅನುಭವಿಸಿರುವೆ. ' ಸತ್ಯೇಂದ್ರನಾಥ! ನೀನು ಹೃದಯವನ್ನು ತೆಗೆದುಕೊಂಡು ಅದರೊಡನೆ ಆಡಿದ್ದೀಯಾ, ಅದಕ್ಕೆ ದೊರೆಯುವ ಶಿಕ್ಷೆಗೆ ನೀನು ಬೆದರುವೆಯಾ? "

ನೀವು ಯುವಕರು. ಸಮಸ್ತ ಸಂಸಾರವು ನಿಮಗೆ ಸುಖದ ನಿಕೇತನವು. ನಿಮ್ಮಲ್ಲಿ ಯಾರಿಗಾದರೂ ಪ್ರಾಣವು ಭಾರವಾಗಿ ಎನಿಸಿದಂತಹ ಕಾಲವು ಬಂದಿಲ್ಲವೇನು? ಜೀವನದ ಪ್ರತಿಯೊಂದು ಗ್ರಂಥಿಗಳೂ ಸಡಿಲಾಗಿ, ಕ್ಲಾಂತ ಭಾವದಿಂದ ಹರಿದು ಹೋಗುವಂತಹ ಸಮಯವು ಬಂದಿಲ್ಲವೇನು? ಒಂದು ವೇಳೆ ಅಂತಹ ಕಾಲವು ಬಂದಿರದಿದ್ದರೆ ನೀವು ಸತ್ಯೇಂದ್ರನನ್ನು ನೋಡಿರಿ; ಒಂದು ಬಾರಿಯಾದರೂ ನೋಡಿರಿ.

ತಿರಸ್ಕಾರ ಮಾಡಲು ನಿಮ್ಮ ಮನಸ್ಸಾದರೆ ಸ್ವಚ್ಛಂದವಾಗಿ ತಿರಸ್ಕಾರ ಮಾಡಿರಿ. ತಿರಸ್ಕರಿಸಿರಿ, ಆದರೆ ಸಹಾನುಭೂತಿಯನ್ನು ತೋರಿಸ ಬೇಡಿರಿ! ತಿರಸ್ಕರಿಸಿರಿ, ಏನೂ ಎನ್ನುವುದಿಲ್ಲ; ದಯೆ ತೋರಿಸಬೇಡಿರಿ– ಸತ್ತು ಹೋಗುವ!

ಪಾಪಿಯು ಸತ್ತರೆ ಪ್ರಾಯಶ್ಚಿತ್ತವನ್ನು ಯಾರು ಭೋಗಿಸುವರು? ಸತ್ಯೇಂದ್ರನ ಶ್ರಾಂತ ಜೀವನದ ಪ್ರತಿಯೊಂದು ದಿನವು ಒಂದಿಲ್ಲೊಂದು ಸಹಿಸಲಾಗದ 'ಭಾರ'ವನ್ನು ತರುವುದು; ದಿನವೆಲ್ಲ ಒದ್ದಾಡುತ್ತಿದ್ದರೂ ಅದನ್ನು ಅವನು ಇಳಿಸಲಾರ!

ತಾನು ಕಳೆದ ಜೀವನವನ್ನು ಮರೆತಿರುವೆನೆಂದು ಸತ್ಯೇಂದ್ರನಿಗೆ ಆಗಾಗ್ಗೆ ಎನಿಸುವುದು. ಆದರೆ ಅವನು ಇಷ್ಟನ್ನು ಮಾತ್ರ ಮರೆತಿಲ್ಲ— "ಅವನ ಪ್ರಿಯ ಪತ್ನಿಯು ಪಬನಾದಲ್ಲಿ ಚರಿತ್ರಹೀನೆಯಾಗಿದ್ದಳು, ಆದುದರಿಂದಲೇ ಆಕೆಯು ಪತಿಯಿಂದ ಪರಿತ್ಯಕ್ತಳಾಗಿರುವಳು."

ಸತ್ಯೇಂದ್ರನ ಮದುವೆಯಾಗಿ ಸುಮಾರು ಎರಡು ತಿಂಗಳು ಕಳೆದು ಹೋಗಿರುವುವು. ಈ ದಿನ ಸತ್ಯೇಂದ್ರನಿಗೆ ಒಂದು ಪತ್ರ ಮತ್ತು ಒಂದು ಚಿಕ್ಕ ಪಾರ್ಸಲು ಬಂದಿರುವುದು.

ಪತ್ರವು ನಳಿನಿಯ ಅಣ್ಣ ನರೇಂದ್ರನದು. ಅದು ಹೀಗಿರುವುದು—

"ಸತ್ಯೇಂದ್ರ ಬಾಬೂ,

ನನಗೆ ತಿಲಮಾತ್ರ ಇಚ್ಛೆಯಿರದಿದ್ದರೂ ನಾನು ನಿಮಗೆ ಈ ದಿನ ಈ ಪತ್ರವನ್ನು ಬರೆಯುತ್ತಿರುವೆ— ನನ್ನ ಪ್ರಾಣಕ್ಕಿಂತಲೂ ಪ್ರಿಯಳಾದ ತಂಗಿ ನಳಿನಿಯ ಆಗ್ರಹದ ಮೇರೆಗೆ. ಸಾಯುವ ಮೊದಲು ಆಕೆಯು ಬಹಳ ಹೇಳಿ ಹೋಗಿರುವಳು— ಈ ಉಂಗುರವನ್ನು ಪುನಃ ನಿಮ್ಮ ಕಡೆಗೆ ಕಳಿಸಬೇಕೆಂದು. ಆದುದರಿಂದ ನಿಮ್ಮ ಹೆಸರಿನ ಉಂಗುರವನ್ನು ತಿರುಗಿ ಕಳಿಸಿರುವೆ. ಈ ಉಂಗುರವನ್ನು ನೀವು ನಿಮ್ಮ ನವೀನ ಪತ್ನಿಯ ಬೆರಳಿಗೆ ತೊಡಿಸಬೇಕೆಂದು ನನ್ನ ತಂಗಿಯ ಇಚ್ಛೆಯಾಗಿದ್ದಿತು. ಆಕೆಯ ಆಸೆಯನ್ನು ಪೂರ್ತಿಗೊಳಿಸಲಾಗುವುದೆಂದು ನಂಬಿದ್ದೇನೆ.

ಅಲ್ಲದೆ, ಆಕೆಯ ಈ ಚಿಕ್ಕ ತಂಗಿಗೆ ಬಹಳ ಕಷ್ಟವಾಗದಂತೆ ನೋಡಿ ಕೊಳ್ಳಬೇಕೆಂದು ಅತ್ಯಂತ ವಿನಯ ಮತ್ತು ಆಗ್ರಹದಿಂದ ನಿಮಗೆ ಹೇಳಬೇಕೆಂದು ತಿಳಿಸಿ, ಅಖಂಡ ಚಿರವಿಶ್ರಾಂತಿಯನ್ನು ಪಡೆಯಲು ಹೋಗಿರುವಳು.

—ಸರೇಂದ್ರನಾಥ. ”

ನಳಿನಿಗೆ ಒಂದು ಗಂಡು ಮಗುವಾಗಿದ್ದಾಗ ಸತ್ಯೇಂದ್ರ ಈ ಉಂಗುರವನ್ನು ಆಕೆಯ ಬೆರಳಿಗೆ ಇಟ್ಟು ಕೆನ್ನೆ ತಟ್ಟಿದ್ದ. ಆ ಮಗುವೂ ಈಗ ಇಲ್ಲ. ಸತ್ಯೇಂದ್ರನಿಗೆ ಈ ಮಾತು ನೆನಪು ಬಂದಿತ್ತೇನು?

× × × ×

ಸತ್ಯೇಂದ್ರ ಈಗ ಪಬನಾದಲ್ಲಿ ಇರುವುದಿಲ್ಲ. ಯಾವ ಕಾರಣ ದಿಂದಲೊ ಏನೊ ಅಪನ ತಾಯಿಯೂ ಕಾಶಿಯಲ್ಲಿ ವಾಸಮಾಡಲು ಹೋಗಲಿಲ್ಲ. ಹೊಸ ಸೊಸೆಯ ಹೆಸರು ವಿಧು. ವಿಧು ಬಹುಶಃ ಹಿಂದಿನ ಜನ್ಮದಲ್ಲಿ ನಳಿನಿಯ ಸೋದರಿ ಇರಬಹುದು.



# ಬೆಳಕು - ನೆಳಲು

೧

'ಹೀಗೆಂದೂ ಆಗಲಾರದು' ಎಂದು ಮೊದಲೇ ಬಾಯಿಗೆ ಬೀಗ ಹಾಕಿಬಿಟ್ಟರೆ ನಾನೇನು ಹೇಳಲಿ? 'ಹೀಗೂ ಆಗಬಹುದು' ಎಂದು ಹೇಳಿದರೆ 'ಹಾಗಾದರೆ ಈ ಕತೆಯನ್ನು ಓದಿ ನೋಡಿರಿ' ಎಂದು ನಾನು ಹೇಳುವೆ. ಇಲ್ಲಿ ಇನ್ನೂ ಒಂದು ಮಾತನ್ನು ನಾನು ಹೇಳಬಯಸುವೆ—ಜಗತ್ತಿನಲ್ಲಿ ಏನೇನು ಎಷ್ಟೆಷ್ಟು ನಡೆಯುತ್ತಿರುವುದೆಂಬುದನ್ನೆಲ್ಲ ನಾನು ಅರಿಯೆ. ಆದಾಗ್ಯೂ ಈ ಕತೆಯನ್ನು ಓದಿರಿ. ನಿಮಗೆ ಇದರಿಂದ ಯಾವ ಬಗೆಯ ಹಾನಿಯೂ ಆಗುವುದಿಲ್ಲ. ನಾನು ಕತೆಯನ್ನು ಬರೆಯುವಾಗ ಎಲ್ಲವನ್ನೂ ಇದ್ದಕ್ಕೆ ಇದ್ದಹಾಗೆ—ಸತ್ಯವಾದುದನ್ನೇ ಬರೆಯುವೆನೆಂದು ಪ್ರತಿಜ್ಞೆಯನ್ನು ಮಾಡಿ ನಾನು ಬರೆಯಲು ಕುಳಿತುಕೊಳ್ಳುವುದಿಲ್ಲ. ಒಂದೆರಡು ಸಾಲುಗಳು ಸುಳ್ಳು ಇರಬಹುದು, ಸ್ವಲ್ಪ ಮತಭೇದದ ಒಂದೆರಡು ಮಾತುಗಳೂ ಇರಬಹುದು. ಇವು ಇದ್ದರೇನು ಕೆಡುಕು? ಇದರಿಂದ ಹಾನಿಯಾದರೂ ಏನಾಗುವುದು? ಇರಲಿ. ನಾಯಕನ ಹೆಸರು ಯಜ್ಞದತ್ತ ಮುಕರ್ಜಿ,— ಆದರೆ ಸುರಮಾ ಅವನಿಗೆ 'ಬೆಳಕು' ಎಂದು ಕರೆಯುವಳು. ನಾಯಿಕೆಯ ಹೆಸರನ್ನು ಕೇಳಿಯೆ ಬಿಟ್ಟಿರುವಿರಿ, ಯಜ್ಞದತ್ತ ಆಕೆಯನ್ನು 'ನೆಳಲು' ಎಂದು ಕರೆಯುವನು. ಕೆಲವು ದಿನಗಳ ವರೆಗೆ ಇಬ್ಬರಲ್ಲಿಯೂ ಬಹಳ ಕಲಹವಿದ್ದಿತು; 'ಬೆಳಕು ಯಾರು? ನೆಳಲು ಯಾರು?' ಎಂಬ ಬಗ್ಗೆ ತೀಕ್ಷ್ಣ ಚರ್ಚೆಯಾದರೂ ನಿಷ್ಕರ್ಷೆ ಮಾತ್ರ ಯಾವುದೂ ಆಗಲಿಲ್ಲ. ಕೊನೆಗೆ ಸುರಮಾ ತಿಳಿಸಿ

ಹೇಳಿದಳು— ನಿನ್ನ ಸೂಕ್ಷ್ಮ ಬುದ್ಧಿಗೆ ಇಷ್ಟೂ ಹೊಳೆಯುವುದಿಲ್ಲವಲ್ಲ— ನೀನು ಇರದಿದ್ದರೆ ನಾನೆಲ್ಲಿಯೂ ಇಲ್ಲ; ಆದರೆ, ನನ್ನನ್ನು ಬಿಟ್ಟು ನೀನು ಚಿರಕಾಲ ಚಿರಜೀವಿ; ಆದುದರಿಂದಲೇ ನೀನು ಬೆಳಕು ಮತ್ತು ನಾನು ನೆಳಲು.

ಯಜ್ಞದತ್ತ ನಕ್ಕು ನುಡಿದ 'ಒಂದೇ ಕಡೆಯಿಂದ ಡಿಗ್ರಿ ಪಡೆದು ಕೊಳ್ಳಬೇಕಾಗಿದ್ದರೆ ತೆಗೆದುಕೊ, ಆದರೆ ನಿಷ್ಕರ್ಷೆ ನೀನು ಮಾಡಿದುದು ಯಾವ ಪ್ರಯೋಜನವೂ ಇಲ್ಲ."

"ಬಹಳ ಚೆನ್ನಾಗಿ ಆಗಿರುವುದು, ಅತ್ಯುತ್ತಮವಾಗಿರುವುದು— ನೀನು ಪ್ರಕಾಶ, ಈಗ ಇನ್ನು ಜಗಳ ಕಾಯಬೇಕಾಗಿಲ್ಲ. ನೀನು ಪ್ರಕಾಶ ಮತ್ತು ನಾನು ಶ್ರೀಮತಿ ಛಾಯಾ" ಎನ್ನುತ್ತ ಛಾಯಾ ಪ್ರಕಾಶನನ್ನು ನಾನಾ ಬಗೆಯಿಂದ ಪೀಡಿಸತೊಡಗಿದಳು.

× × × ×

ಕತೆಯು ಇಷ್ಟಾಯಿತು. ಆದರೆ, ಇನ್ನು ನಿಮ್ಮೊಡನೇ ಮಲ್ಲ- ಯುದ್ಧವೆಲ್ಲಿ ನಡೆಯುವುದೊ ಎಂಬ ಭಯ ನನಗೆ. ನೀವು ಎನ್ನಬಹುದು ಇವರು ಗಂಡ-ಹೆಂಡಿರು; ನಾನೆನ್ನುವೆ— ನಿಜ, ಇವರು ಗಂಡುಸು- ಹೆಂಗುಸು. ಆದರೆ ಗಂಡ-ಹೆಂಡಿರಲ್ಲ. ನಾನು ಹೀಗೆಂದ ಕೂಡಲೇ ನೀವು ಕೋಪಿಸಿಕೊಂಡು "ಇವರಲ್ಲಿ ಅನುಚಿತ ಪ್ರೇಮವಿರುವುದೇನು ?" ಎಂದು ಕೇಳಿಬಿಡುವಿರಿ. ಆಗ ನಾನು ಬಹಳ ಶುದ್ಧ ಪ್ರೇಮವಿರುವುದೆಂದು ಹೇಳುವೆ. ನೀವು ನನ್ನ ಮಾತಿನ ಮೇಲೆ ಯಾವ ರೀತಿಯಲ್ಲಿಯೂ ವಿಶ್ವಾಸ ಇಡುವುದಿಲ್ಲ. ಮುಖಾಕೃತಿಯನ್ನು ಕೆಡಿಸಿಕೊಂಡು "ವಯಸ್ಸೇನು ?' ಎಂದು ಕೇಳುವಿರಿ. ನಾನು ಹೇಳುವೆ "ಪ್ರಕಾಶನ ವಯಸ್ಸು ಇಪ್ಪತ್ತು ಮೂರು ವರ್ಷದ್ದು ಮತ್ತು ಛಾಯಾನ ವಯಸ್ಸು ಹದಿನೆಂಟು ವರ್ಷಷ್ಟು ಇರಬಹುದು."

ಇಷ್ಟು ಹೇಳಿದ ಮೇಲೆಯೂ ಇನ್ನೂ ನಿಮಗೆ ಕೇಳುವ ಇಚ್ಛೆ ಇದ್ದರೆ ಕೇಳಿರಿ. ಹೇಳುವೆ.

ಚಿಕ್ಕದಾಗಿ ಕತ್ತರಿಸಿದ ಎಡ್ವರ್ಡರಂತಹ ಗಡ್ಡ, ಮೂಗಿನ ಮೇಲೆ ಕನ್ನಡಕ, ತಲೆಯ ಮೇಲೆ ಲೆವೆಂಡರದ ಸುವಾಸನೆ, ಡಾಕಾದ ಉತ್ತಮ ದೋತರ, ಸುಗಂಧದ ಎಣ್ಣೆಯಿಂದ ಮಗಮಗಿಸುವ ಶರ್ಟು, ಕಾಲುಗಳಲ್ಲಿ ಮುಖಮಲ್ಲಿನಿಂದ ಮಾಡಿದ ಸ್ಲೀಪರು, ಲಾಯಬ್ರರಿಯ ತುಂಬ ಪುಸ್ತಕಗಳು. ಅನೇಕ ಜನ ದಾಸದಾಸಿಯರು ಯಜ್ಞದತ್ತನಿಗೆ ಉಂಟು. ಯಜ್ಞದತ್ತನ ಸ್ಲೀಪರುಗಳ ಮೇಲೆ ಛಾಯಾ ತನ್ನ ಕೈಯಿಂದಲೇ ಹೂವಿನ ಕಸೂತಿ ಹಾಕಿರುವಳು. ಟೇಬಲ್ಲಿನ ಒಂದು ಮಗ್ಗಲಿಗೆ ಕುಳಿತು ಅವನು ಒಂದು ಪತ್ರ ಬರೆಯುತ್ತಿರುವ. ಪರದೆಯನ್ನು ಮೆಲ್ಲಗೆ ಎತ್ತಿ ಛಾಯಾ ತುದಿಗಾಲಮೇಲಿಂದ ಒಳಗೆ ಬಂದಳು. ಹಿಂದಿನಿಂದ ಹೋಗಿ ತನ್ನ ಪ್ರಕಾಶನ ಕಣ್ಣು ಮುಚ್ಚಬೇಕೆಂದು ಆಕೆಯ ಬಯಕೆ. ಕೈಯನ್ನು ಮುನ್ನೀಡುತ್ತಲೇ ದೃಷ್ಟಿಯು ಎದುರಿಗಿನ ಕನ್ನಡಿಯ ಮೇಲೆ ಬಿದ್ದಿತು. ಯಜ್ಞದತ್ತ ಆಕೆಯ ಮುಖವನ್ನು ನೋಡುತ್ತ ನಸುನಗುತ್ತಿರುವುದನ್ನು ಅದರಲ್ಲಿ ಆಕೆಯು ಕಂಡಳು. ಸುರಮಾ ಸಹ ನಕ್ಕಳು. ಆಕೆಯೆಂದಳು "ಏಕೆ ನೋಡಿದಿ?"

ಯಜ್ಞದತ್ತ "ಇದು ನನ್ನ ತಪ್ಪೇನು?" ಎಂದ.

ಸುರಮಾ ಎಂದಳು "ಹಾಗಾದರೆ ಯಾರದು?"

"ಅರ್ಧ ನಿನ್ನದು ಮತ್ತು ಅರ್ಧ ಈ ಕನ್ನಡಿಯದು."

"ಈಗಲೇ ಅದನ್ನು ನಾನು ಮುಚ್ಚಿಬಿಡುವೆ."

"ಮುಚ್ಚಿಬಿಡು, ಉಳಿದ ಅರ್ಧ ತಪ್ಪಿಗಾಗಿ ಏನು ಮಾಡುವಿ?"

ಮೂರು ನಾಲ್ಕು ಬಾರಿ ಸುರಮಾ ತಲೆಯನ್ನು ಅಲ್ಲಾಡಿಸಿ ಎಂದಳು "ಪ್ರಕಾಶ?"

ಯಜ್ಞದತ್ತ ಎಂದ "ಹೇಳು ಏನದು ಛಾಯಾ!"

"ನೀನೇಕೆ ಸೊರಗುತ್ತ ಸಾಗಿರುವೆ?"

"ನನಗೆ ಎನಿಸುವುದಿಲ್ಲವಲ್ಲ ನಾನು ಸೊರಗಿರುವೆನೆಂದು."

“ ನೀನು ಊಟವನ್ನೇಕೆ ಮಾಡುವುದಿಲ್ಲ ? ”

ಯಜ್ಞದತ್ತ ನಗತೊಡಗಿದ. ಅವನೆಂದ “ ಸುರೋ, ಜಗಳಾಡಲು ಬಂದಿರುವೆಯೇನು ? ”

“ ಹೂಂ ! ”

“ ನಾನು ಇದಕ್ಕೆ ಒಪ್ಪುವುದಿಲ್ಲ. ”

“ ನೀನು ಮದುವೆಯನ್ನೇಕೆ ಮಾಡಿಕೊಳ್ಳುವದಿಲ್ಲ ? ”

“ ದಿನಾಲು ಒಂದು ಬಾರಿಯಾದರೂ ಇದಕ್ಕೆ ಕಾರಣವನ್ನು ಹೇಳುತ್ತಿರುವೆ. ”

“ ಇಲ್ಲ, ನೀನು ಮದುವೆ ಮಾಡಿಕೊಳ್ಳಲೇಬೇಕು. ”

“ ಸುರೋ, ನೀನು ಮದುವೆಯನ್ನೇಕೆ ಮಾಡಿಕೊಳ್ಳುವುದಿಲ್ಲ ? ”

ಸುರಮಾ ಯಜ್ಞದತ್ತನ ಕೈಯೊಳಗಿಂದ ಕಾಗದವನ್ನು ಕಸಿದುಕೊಂಡು “ ಛೀ, ವಿಧವಾವಿವಾಹವಾಗುವುದೇ ? ” ಎಂದಳು.

ಯಜ್ಞದತ್ತ ಸ್ವಲ್ಪ ಹೊತ್ತು ಸುಮ್ಮಗಿದ್ದು “ ಯಾರಿಗೆ ಗೊತ್ತು ? ಕೆಲವರು ಆಗುತ್ತದೆ ಎಂದು ಹೇಳುವರು, ಕೆಲವರು ಆಗುವುದಿಲ್ಲ ಎಂದು ಎನ್ನುವರು. ”

“ ಹಾಗಾದರೆ ಇವರ ಮಾತುಗಳಿಗೆ ನಾನು ಸಾಕ್ಷೀದಾರಳೇಕೆ ಆಗಬೇಕು ? ”

ಯಜ್ಞದತ್ತ ನೀಳವಾದ ಉಸಿರ್ಗರೆದು “ ಹಾಗಾದರೆ, ನನ್ನ ಸೇವೆಯನ್ನೇ ಮಾಡುತ್ತ ಮಾಡುತ್ತ ಜೀವನವನ್ನು ಕಳೆಯುವಿಯಾ ? ” ಎಂದ.

“ಹೂಂ” ಎಂದು ಸುರಮಾ ಕಂಬನಿಗಳನ್ನು ಸುರಿಸತೊಡಗಿದಳು.

ಯಜ್ಞದತ್ತ ಆಕೆಯ ಕಂಬನಿಗಳನ್ನು ಒರೆಸುತ್ತ “ ಸುರೋ, ನಿನ್ನ ಮನದಲ್ಲಿ ಇರುವ ಬಯಕೆಯನ್ನು ನನಗೆ ಸ್ಪಷ್ಟವಾಗಿ ಹೇಳಿಬಿಡುವುದಿಲ್ಲವೆ ? ” ಎಂದ.

" ನನ್ನನ್ನು ವೃಂದಾವನಕ್ಕೆ ಕಳಿಸಿಬಿಡು. "

" ನನ್ನನ್ನು ಬಿಟ್ಟು ಇರಬಲ್ಲೆಯಾ? "

ಸುರಮಾನ ಬಾಯಿಂದ ಮಾತು ಹೊರಬೀಳಲಿಲ್ಲ. ಅತ್ತಿತ್ತ ಒಂದೆರಡು ಬಾರಿ ಕತ್ತನ್ನು ತಿರುಗಿಸಿ ಉತ್ತರ ಕೊಡುವುದಕ್ಕಿಂತ ಮೊದಲೇ ಕಂಬನಿಗಳು ಹೊಳೆಯಾಗಿ ಹರಿಯತೊಡಗಿದುವು.

× × × ×

೨

" ಯಜ್ಞಣ್ಣ, ಆ ಕತೆಯನ್ನು ಇನ್ನೊಮ್ಮೆ ಹೇಳು. "

" ಯಾವ ಕತೆ ಸುರಮಾ? "

" ಅದನ್ನು, ನನ್ನನ್ನು ವೃಂದಾವನದಲ್ಲಿ ಕೊಂಡಾಗಿನದನ್ನು. ಎಷ್ಟು ರೂಪಾಯಿಗಳಿಗೆ ಕೊಂಡಿದ್ದರು? "

" ಐವತ್ತು ರೂಪಾಯಿಗಳಿಗೆ. ಆಗ ನನ್ನ ವಯಸ್ಸು ಹದಿನೆಂಟು ವರ್ಷದ್ದಿದ್ದಿತು. ಬಿ. ಎ. ಪರೀಕ್ಷೆಯನ್ನು ಕೊಟ್ಟು ಆ ಕಡೆಗೆ ಪ್ರವಾಸಕ್ಕಾಗಿ ಹೋಗಿದ್ದೆ. ಆಗ ನನ್ನ ತಾಯಿ ಇನ್ನೂ ಬದುಕಿದ್ದಳು, ಆಕೆಯೂ ಸಂಗಡ ಇದ್ದಳು. ಒಂದು ದಿನ ಮಧ್ಯಾಹ್ನ ಮಾಲತಿ-ಕುಂಜದ ಬಳಿಯಲ್ಲಿ ವೈಷ್ಣವಿಗಳ ಒಂದು ಗುಂಪು ಹಾಡುತ್ತ ಹೋಗುತ್ತಿದ್ದಿತು. ಅದರಲ್ಲೇ ನಾನು ನಿನ್ನನ್ನು ಮೊದಲು ಕಂಡುದು. ಯೌವನದ ಹೊಸ್ತಿಲದ ಮೇಲೆ ಕಾಲಿಡುತ್ತಲೇ ಜಗತ್ತು ಅತ್ಯಂತ ಸುಂದರವಾಗಿ ಕಾಣತೊಡಗುವುದು. ಕೇವಲ ಅದನ್ನು ನೋಡಿ ಅದರ ಸವಿಯನ್ನು ಸಂಪೂರ್ಣವಾಗಿ ಸವಿಯಲಿಕ್ಕಾಗುವುದಿಲ್ಲ. ಆ ಶೋಭೆಯನ್ನು ಅನುಭವಿಸುವುದಕ್ಕಾಗಿ ನನ್ನಂತಹವೇ ಇನ್ನೆರಡು ಕಣ್ಣುಗಳನ್ನು ಮನವು ಬಯಸುವುದು. ಅದನ್ನು ನಿನಗೆ ತಿಳಿಸಿ ಹೇಳಲು ಸಮರ್ಥನಾದರೆ—ಸುರಮಾ, ಅಳುತ್ತಿರುವೆಯಾ? "

" ಇಲ್ಲ, ನೀನು ಹೇಳು. "

"ಆಗ ನೀನು ಹದಿಮೂರು ವರ್ಷದ ಹೊಸ ವೈಷ್ಣವಿಯಾಗಿದ್ದೆ. ಕೈಯಲ್ಲಿ ತಂಬೂರಿಯಿದ್ದಿತು. ನೀನು ಹಾಡುತ್ತಿದ್ದೆ."

"ಹೋಗು, ನಾನು ಹಾಡಬಲ್ಲೆನೇನು?"

"ಆಗ ಹಾಡಬಲ್ಲವಳಾಗಿದ್ದೆ. ಬಳಿಕ ಬಹಳ ಪರಿಶ್ರಮ ಪಟ್ಟ ನಂತರ ನಿನ್ನನ್ನು ಪಡೆದೆ. ನೀನು ಬ್ರಾಹ್ಮಣರ ಹುಡುಗಿ— ಬಾಲವಿಧವೆಯಾಗಿದ್ದೆ. ತಾಯಿಯು ನಿನ್ನ ತೀರ್ಥಸ್ಥಾನಕ್ಕೆ ಬಂದಳು, ಅಲ್ಲಿಂದ ಹಿಂತಿರುಗಿ ಬರಲಿಲ್ಲ— ಸ್ವರ್ಗಕ್ಕೆ ಹೋದಳು. ನಾನು ನಿನ್ನನ್ನು ಕರೆದುಕೊಂಡು ಬಂದು ನನ್ನ ತಾಯಿಗೆ ಒಪ್ಪಿಸಿದೆ. ಆಕೆಯು ನಿನ್ನನ್ನು ಅಪ್ಪಿಕೊಂಡಳು. ಪುನಃ ಸಾಯುವಾಗ ನಿನ್ನನ್ನು ನನ್ನ ಕೈಗೇ ಒಪ್ಪಿಸಿ ಹೋದಳು."

"ಯಜ್ಞಣ್ಣ, ನಿನ್ನ ಮನೆ ಯಾವ ಊರಲ್ಲಿರುವುದು?"

"ಕಿಸನ ನಗರದ ಬಳಿ ಎಲ್ಲಿಯೊ ಇರುವುದೆಂದು ಕೇಳಿರುವೆ."

"ನನ್ನ ಆಪ್ತೇಷ್ಟರು ಯಾರೂ ಇರುವುದಿಲ್ಲವೆ?"

"ನಾನು ಇರುವೆನಲ್ಲವೆ? ನಾನೇ ನಿನಗೆ ಎಲ್ಲಾ ಸುರಮಾ."

ಸುರಮಾನ ರೆಪ್ಪೆಗಳು ಪುನಃ ಒದ್ದೆಯಾದುವು. ಆಕೆಯು ಎಂದಳು "ನೀನು ನನಗೆ ಪುನಃ ಮಾರಬಲ್ಲೆಯಾ?"

"ಇಲ್ಲ, ಹಾಗೆಂದಿಗೂ ಮಾಡಲಾರೆ. ನನ್ನನ್ನು ನಾನು ಮಾರಿಕೊಳ್ಳದ ಹೊರತು ನಿನ್ನನ್ನು ಹೇಗೆ ಮಾರುವುದು ಸುರಮಾ? ಇದೆಂದಿಗೂ ನನ್ನಿಂದ ಆಗದ ಮಾತು."

ಸುರಮಾ ಏನನ್ನೂ ಮಾತನಾಡಲಿಲ್ಲ. ಕಂಬನಿದುಂಬಿದ ಕಣ್ಣುಗಳಿಂದ ಅವನನ್ನು ಹಾಗೆಯೆ ನೋಡತೊಡಗಿದಳು. ಬಹಳ ಹೊತ್ತಾದ ಬಳಿಕ ಮೆಲ್ಲಗೆ ಮಾತನಾಡಿದಳು "ನೀನು ಅಣ್ಣ, ನಾನು ತಂಗಿ. ನಮ್ಮಿಬ್ಬರ ನಡುವೆ ಒಬ್ಬಾಕೆಯನ್ನು ಕರೆದುಕೊಂಡು ಬಾ ಅಣ್ಣ."

"ಅದೇಕೆ?"

" ಇಡಿ ದಿನ ಆಕೆಯನ್ನು ಸಿಂಗರಿಸಿ, ನಿನ್ನ ಬಳಿಗೆ ಕರೆದುಕೊಂಡು ಬಂದು ಕುಳ್ಳಿರಿಸುವೆ. "

'' ಅವನ್ನು ನೀನು ಮನಃಪೂರ್ವಕವಾಗಿ ಮಾಡಬಲ್ಲೆಯಾ ? ''

ಸುರಮಾ ಮುಖವೆತ್ತಿ ತನ್ನ ಕಣ್ಣುಗಳನ್ನು ಅವನ ಕಣ್ಣುಗಳಲ್ಲಿ ಇರಿಸಿ '' ನಾನಿಷ್ಟು ಅಧಮಳೇನು ಆಕೆಯನ್ನು ಕಂಡು ಹೊಟ್ಟೆಕಿಚ್ಚು ಪಡಲಿಕ್ಕೆ ? '' ಎಂದಳು.

'' ಹೊಟ್ಟೆಕಿಚ್ಚು ಪಡುವುದಿಲ್ಲ, ನಿನ್ನ ಸ್ಥಾನದಲ್ಲಿ ಆಕೆಯ ಲೂಟಿ ಮಾಡಗೊಡುವಿಯಲ್ಲವೆ ? ''

'' ನಾನು ಹಾಗೇಕೆ ಮಾಡಗೊಡುವೆ ? ನಾನು ರಾಣಿಯಾಗಿಯೆ ಇರುವೆ. ಒಬ್ಬ ಮಂತ್ರಿಯನ್ನು ಮಾತ್ರ ನಿಯಮಿಸುವೆ., ಇಬ್ಬರೂ ಸೇರಿ ನಿನ್ನ ರಾಜ್ಯವನ್ನು ನಡೆಸುವೆವು. ಅದರಲ್ಲಿ ಅತ್ಯಂತ ಆನಂದ ದೊರೆಯುವುದು. ''

" ನೋಡು ಛಾಯಾ, ಮದುವೆಯಾಗಲು ನನಗೆ ಇಚ್ಛೆಯಿಲ್ಲ. ಆದರೆ, ನಿನಗೆ ಒಬ್ಬ ಜೊತೆಗಾತಿಯು ಬೇಕಾಗಿದ್ದರೆ— ಅತ್ಯಂತ ಅಗತ್ಯವಿದ್ದರೆ ವಿವಾಹ ಮಾಡಿಕೊಳ್ಳಬಲ್ಲೆ. ''

" ಅವಶ್ಯವಾಗಿ ಮಾಡಿಕೊ, ಅತ್ಯಂತ ಸಂತೋಷವಾಗುವುದು. ಇಬ್ಬರೂ ಆನಂದದಿಂದ ಕಾಲಕಳೆಯುವೆವು. "

ಇಷ್ಟೆಂದು ಸುರಮಾ ಮನದಲ್ಲಿಯೆ ಎಂದುಕೊಂಡಳು '' ಮೂರೂ ಕುಲಗಳಲ್ಲಿ ನನ್ನವರಾರೂ ಇಲ್ಲ; ಮಾನಾಪಮಾನವಾಗುವಂತಹದೇನೂ ಇಲ್ಲ. ಆದರೆ, ನೀನೇಕೆ ನನಗಾಗಿ ಜಗತ್ತಿನ ಕಲಂಕವನ್ನು ಹೊರುವಿ ? ನೀನು ನನ್ನ ದೇವರು ! ನೀನು ಮದುವೆ ಮಾಡಿಕೊ, ನಿನ್ನ ಮುಖವನ್ನು ನೋಡಿ, ನಾನು ಎಲ್ಲವನ್ನೂ ಸಹಿಸುವೆ. "

× × × ×

೩

ಕಲಕತ್ತೆಯಲ್ಲಿ ತಮ್ಮ ನೆರೆಹೊರೆಯವರ ಪರಿಚಯವಿಲ್ಲದವರು ಬಹಳ ಜನರು ಇರುವರು. ಪರಿಚಯವಾದರೆ ಬಹಳ ಪರಿಚಯವಾಗುವುದು. ಹೀಗೆ ತಮ್ಮ ನೆರೆಹೊರೆಯರ ಪರಿಚಯವನ್ನು ಮಾಡಿಕೊಂಡವರು ಯಜ್ಞದತ್ತನ ವಿಚಾರವಾಗಿ ಹೀಗೆ ಹೇಳುವರು— ಯಜ್ಞದತ್ತ ಬಿ. ಎ. ಪಾಸಾದರೇನಾಯಿತು ? ಅನಾಥ. ಅವರು ಸೂಚ್ಯವಾಗಿ ಸುರಮಾನ ಬಗ್ಗೆ ಕೂಡ ಆಡಿಕೊಳ್ಳುವರು ! ಒಮ್ಮೊಮ್ಮೆ ಈ ಮಾತುಗಳು ಸುರಮಾ ಮತ್ತು ಯಜ್ಞದತ್ತನ ಕಿವಿಗೂ ಬೀಳುತ್ತವೆ. ಅವನ್ನು ಕೇಳಿ ಇಬ್ಬರೂ ನಗತೊಡಗುವರು.

ನೀವು ಒಳ್ಳೆಯವರೇ ಇರಿ ಅಥವಾ ಕೆಟ್ಟವರೇ ಇರಿ, ನೀವು ದೊಡ್ಡ ಮನುಷ್ಯರಿದ್ದರೆ ನಿಮ್ಮ ಮನೆಗೆ ಜನರು ಬಂದೇ ಬರುವರು— ವಿಶೇಷತಃ ಹೆಂಗುಸರು. ಒಬ್ಬಳು ಎನ್ನುತ್ತಿದ್ದಳು " ಸುರಮಾ, ನಿನ್ನ ಅಣ್ಣನ ಮದುವೆಯನ್ನೇಕೆ ಮಾಡುವುದಿಲ್ಲ ? ''

ಸುರಮಾ ಉತ್ತರವೀಯುತ್ತಿದ್ದಳು '' ನೀವೇ ಒಂದು ಒಳ್ಳೇ ಹುಡುಗೆಯನ್ನು ಹುಡುಕಿ ಮದುವೆ ಮಾಡಿ ಬಿಡಬಾರದೇ ? "

ಸುರಮಾನ ಸಖಿಯಾಗಿದ್ದರೆ ಆಕೆಯು ನಕ್ಕು ಎನ್ನುತ್ತಿದ್ದಳು " ಒಳ್ಳೇ ಹುಡುಗೆ ಸಿಕ್ಕುವುದು ಕಠಿನ, ನಿನ್ನ ರೂಪ ಯಾರ ನೋಟದಲ್ಲಿ ನಾಟಿರುವುದೊ ಅವರ— "

'' ಹೋಗೇ ಹೋಗು— '' ಎಂದು ನುಡಿಯುವಾಗ ಸುರಮಾನ ಮುಖ ಸ್ನೇಹ ಮತ್ತು ಗರ್ವದಿಂದ ಕೆಂಪೇರುತ್ತಿದ್ದಿತು.

ಆ ದಿನ ಮಧ್ಯಾಹ್ನ ಸ್ವಲ್ಪ ಮಳೆಹನಿ ಉದುರುತ್ತಿದ್ದುವು. ಸುರಮಾ ಕೋಣೆಯೊಳಗೆ ಹೋಗುತ್ತಲೇ '' ನಿನಗೊಂದು ಹುಡುಗೆಯನ್ನು ಹುಡುಕಿ ತಂದಿರುವೆ. '' ಎಂದಳು.

'' ಓಹೋ, ತಲೆಯಮೇಲಿಂದ ಒಂದು ಭಾರ ಇಳಿದಂತಾಯಿತು. ಎಲ್ಲಿಂದ ? ಹೇಗೆ ? ಹೇಳು ಸ್ವಲ್ಪ ಕೇಳೋಣ. "

"ಆ ಓಣಿಯಲ್ಲಿ ಮಿತ್ರ ಎಂಬವರು ಇರುವರಲ್ಲವೆ? ಅವರ ಮನೆಯಿಂದ!"

"ಬ್ರಾಹ್ಮಣನಾಗಿ ಕಾಯಸ್ಥರ ಮನೆಯ ಕನ್ಯೆಯ ಕೂಡ?"

"ಕಾಯಸ್ಥರ ಮನೆಯಲ್ಲಿ ಬ್ರಾಹ್ಮಣರು ಇರುವುದಿಲ್ಲವೆ? ಆ ಹುಡುಗೆಯ ತಾಯಿ ಅವರ ಮನೆಯಲ್ಲಿ ಅಡುಗೆ ಮಾಡುತ್ತಿದ್ದಳು. ಹುಡುಗೆ ಬಹಳ ಚೆನ್ನಾಗಿದ್ದಾಳೆಂದು ಕೇಳಿರುವೆ. ನೋಡಿ ಬಾ, ಮನಸ್ಸಿಗೆ ಬಂದರೆ ಮನೆಗೆ ಕರೆದುಕೊಂಡು ಬಾ."

"ಜಗತ್ತಿನಲ್ಲಿರುವ ಭಿಕ್ಷುಕಿಯರ ಹೊರತು ನನ್ನ ಮನೆತನ ನಡೆಯುವಂತಿಲ್ಲವೆ? ನಾನಿಷ್ಟು ಹತಭಾಗ್ಯವಂತನೆ?"

"ಭಿಕ್ಷುಕಿಯರನ್ನು ಸಂಗ್ರಹಿಸುವುದು ನಿನಗೆ ಕಠಿನವಾದ ಕೆಲಸವೇನು?"

"ಬಳಿಕ—!"

"ಹೋಗು, ಹೋಗು. ಮನಸ್ಸಿನಲ್ಲಿ 'ನೆಟ್ಟ'ರೆ 'ಇಲ್ಲ'ಎಂದು ಹೇಳಬೇಡ."

"ಮನದಲ್ಲಿ ಎಂದೂ ನೆಡುವಂತೆ ಇಲ್ಲ."

"ನೆಡುವಳು, ಚೆನ್ನಾಗಿ ನೆಡುವಳು! ಒಂದು ಬಾರಿ ಹೋಗಿ ನೋಡಿಯಾದರೂ ಬಾ."

ಬಳಿಕ ಛಾಯಾದೇವಿಯು ಪ್ರಕಾಶದೇವನಿಗೆ ಈ ಬಗೆಯಾಗಿ ಶಿಕ್ಷೆಯನ್ನು ಕೊಟ್ಟಳು— ಸುವಾಸನೆಯ ವಸ್ತುಗಳ ಲೇಪನ ಮಾಡಿ, ಕ್ರಾಪಿನಲ್ಲಿ ಚೆನ್ನಾಗಿ ಬೈತಲೆ ತೆಗೆದು ಕನ್ನಡಿಯು ಮುಂದೆ ನಿಲ್ಲಿಸಿದಳು. ತನ್ನ ರೂಪವನ್ನು ನೋಡಿ ನಾಚಿದ. ಬಳಿಕ ಎಂದ "ಛಿಃ, ಇಷ್ಟು ಮಾಡುವುದು ತರವಲ್ಲ."

"ಇರಲಿ ಬಿಡು, ಹೋಗಿ ನೋಡಿ ಬಾ."

ಗಾಡಿಯಲ್ಲಿ ಕುಳಿತು ಯಜ್ಞದತ್ತ ಹುಡುಗೆಯನ್ನು ನೋಡಲು ಹೋದ. ದಾರಿಯಲ್ಲಿ ಒಬ್ಬ ಮಿತ್ರನನ್ನು ಸಂಗಡ ಕರೆದುಕೊಂಡು

'ನಡೆ, ಶ್ರೀ. ಮಿತ್ರ ಅವರ ಮನೆಗೆ ಹೋಗಿ ಫಲಾಹಾರ ಮಾಡಿ ಬರೋಣ' ಎಂದ.

ಮಿತ್ರ ಕೇಳಿದ "ಎಂವರೆ?"

"ಅವರ ಮನೆಯಲ್ಲಿ ಓರ್ವ ಭಿಕ್ಷುಕಿಯ ಹುಡುಗಿ ಇರುವಳಂತೆ. ಆಕೆಯೊಡನೆ ಮದುವೆ ಮಾಡಿಕೊಳ್ಳಬೇಕಂತೆ."

"ಏನು ಎನ್ನುವಿಯೊ? ಇದನ್ನಾರು ನಿನಗೆ ಕಲಿಸಿದರು?"

"ನೀವು ಯಾರನ್ನು ನೋಡಿ ಹೊಟ್ಟೆಕಿಚ್ಚು ಪಡುತ್ತಿರುವಿರೋ ಆ ಛಾಯಾದೇವಿಯೇ."

ಯಜ್ಞದತ್ತ ತನ್ನ ಮಿತ್ರನ ಕೂಡ ಶ್ರೀ. ಮಿತ್ರ ಅವರ ಮನೆಗೆ ಹುಡುಗೆಯನ್ನು ನೋಡಲಿಕ್ಕೆ ಹೋದ. ಹುಡುಗೆಯು ಕಾರ್ಪೆಟ್ಟಿನ ಮೇಲೆ ಕುಳಿತಿದ್ದಳು. ಕ್ರಮುಗ್ಗದ ಬಟ್ಟೆಯನ್ನು ಉಟ್ಟಿದ್ದಳು. ಅನೇಕ ಬಾರಿ ಅದನ್ನು ಒಗೆದು ಸ್ವಚ್ಛ ಮಾಡಲಾಗಿದ್ದಿತು. ಇದರಿಂದ ಅದು ಅಲ್ಲಲ್ಲಿ ಜಾಳಿಗೆಯಾಗಿ ಬಿಟ್ಟಿದ್ದಿತು. ಕೈಯಲ್ಲಿ ಕಾಜಿನ ಬಳೆಗಳಿದ್ದುವು. ಅವುಗಳ ಜೊತೆಗೆ ತಾಮ್ರವರ್ಣದ ಬಂಗಾರದ ಬಳೆಗಳು. ತಲೆಗೆ ಎಣ್ಣೆ ಹಚ್ಚಿಕೊಂಡುದನ್ನು ನೋಡಿದರೆ ಎಣ್ಣೆಯಿಂದಲೆ ಎರಕೊಂಡು ಬಂದಿರುವಳೇನೊ ಎಂಬಂತೆ ಕಾಣುತ್ತಿದ್ದಿತು. ದೇವರ ಪ್ರಭಾವಳಿಯಂತೆ ಹಿಂದೆ ತುರುಬು ಎದ್ದು ನಿಂತಿದ್ದಿತು. ಇಬ್ಬರೂ ಆಕೆಯನ್ನು ನೋಡಿದ ಕೂಡಲೆ ನಸುನಕ್ಕರು. ನಗುವನ್ನು ಬಚ್ಚಿಡುತ್ತ ಹುಡುಗೆಯ ಕಡೆಗೆ ನೋಡುತ್ತ ಯಜ್ಞದತ್ತ ಎಂದ "ನಿನ್ನ ಹೆಸರೇನು?"

ಹುಡುಗೆಯು ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ಅವನ ಮುಖದ ಮೇಲೆ ಶಾಂತವಾಗಿರಿಸಿ ಎಂದಳು "ಪ್ರತುಲ."

ಯಜ್ಞದತ್ತ ತನ್ನ ಗೆಳೆಯನಿಗೆ ಮೆಲ್ಲಗೆ ನಸುನಗುತ ಕೇಳಿದ "ಏನೋ, ಗದಾಧರ* ಏನು ಮತ್ತೆ?"

---

*ಸ್ವರ್ಗೀಯ ಗಿರೀಶಚಂದ್ರ ಘೋಷ ಅವರ ಒಂದು ಪಾತ್ರ—ಪೋಲೀಸರ ಭಯದಿಂದ ಸೀರೆ ಉಟ್ಟುಕೊಂಡು ತನ್ನನ್ನು ಬಚ್ಚಿಟ್ಟುಕೊಳ್ಳುವುದಕ್ಕಾಗಿ ಯತ್ನಿಸುತ್ತಿರುವ ವ್ಯಕ್ತಿ.

ಗೆಳೆಯ ಸ್ವಲ್ಪ ನುಗಿಸಿ "ಹೆಚ್ಚು ಬಡಬಡಿಸಬೇಡ, ಬೇಗನೇ ಒಪ್ಪಿಬಿಡು" ಎಂದ.

"ಒಳ್ಳೆದು, ಈಗಲೇ— "

"ಒಳ್ಳೇದು, ನೀನು ಏನು ಓದುವೆ?" ಎಂದು ಹುಡುಗೆಯನ್ನು ಯಜ್ಞದತ್ತ ಕೇಳಿದ.

"ಏನೂ ಇಲ್ಲ."

"ಬಹಳ ಒಳ್ಳೇದು."

"ಕೆಲಸಬೊಗಸೆ ಬರುವುದೇನು?"

ಪ್ರತುಲಳು ತಲೆಯಲ್ಲಾಡಿಸಿದಳು. ಬಳಿಯಲ್ಲಿ ಒಬ್ಬ ದಾಸಿಯು ನಿಂತಿದ್ದಳು. ಆಕೆಯೇ ನುಡಿದಳು— ಬಹಳ ಚುರುಕು ಇದ್ದಾಳೆ, ತನ್ನ ತಾಯಿಯಂತೆ ಅಡುಗೆ, ಮನೆತನದ ಕೆಲಸಬೊಗಸೆಯಲ್ಲಿ ಬಹಳ ಜಾಣೆ, ಬಾಯಿಂದ ಮಾತೇ ಹೊರಡುವುದಿಲ್ಲ. ಬಹಳ ಶಾಂತಳಾಗಿದ್ದಾಳೆ.

"ಅದನ್ನು ನೋಡುತ್ತಿರುವೆ. ನಿನ್ನ ತಂದೆ ಇದ್ದಾರೇನು?"

"ಇಲ್ಲ."

"ತಾಯಿ ಸತ್ತು ಹೋಗಿರುವಳೇನು?"

"ಹೌದು."

ಈ ಮೂಕ–ಮೂರ್ಖ ಹುಡುಗೆಯ ಕಣ್ಣುಗಳಲ್ಲಿ ಕಂಬನಿ ತುಂಬಿ ಬಂದುದನ್ನು ಯಜ್ಞದತ್ತ ನೋಡಿ "ನಿನಗೆ ಯಾರೂ ಇಲ್ಲವೇನು?" ಎಂದು ಕೇಳಿದ.

"ಇಲ್ಲ."

"ನಮ್ಮ ಮನೆಗೆ ಬರುವೆಯಾ?"

ಅವಳು ತಲೆಯಲ್ಲಾಡಿಸಿದಳು— ಹೂಂ. ಇಷ್ಟರಲ್ಲಿ ಆಕೆಯ ದೃಷ್ಟಿಯು ಕಿಡಕಿಯ ಕಡೆಗೆ ಬಿದ್ದಿತು. ಆಗ ಆಕೆಯ ಕಣ್ಣುಗಳಿಂದ

ಕಿಡಿಗಳು ಹೊರಬೀಳುತ್ತಿರುವಂತೆ ಕಾಣಿಸಿತು! ಆಕೆಯು ಹೆದರಿ "ಇಲ್ಲ" ಎಂದಳು.

ಹೊರಗೆ ಬಂದ ಬಳಿಕ ಶ್ರೀ. ಮಿತ್ರರ ಭೆಟ್ಟಿಯಾಯಿತು.

"ಹುಡುಗೆಯು ಹೇಗಿದ್ದಾಳೆ?'

"ಚೆನ್ನಾಗಿದ್ದಾಳೆ."

"ಹಾಗಾದರೆ ಮದುವೆಯ ಮುಹೂರ್ತವನ್ನು ನಿಶ್ಚಯ ಮಾಡಿ ಬಿಡೋಣವೆ?"

"ಹೂಂ. ಹೂಂ."

× × × ×

೪

ಹನ್ನೆರಡು ಹದಿಮೂರು ವರ್ಷದ ಬಾಲಕನ ಕೈಯಿಂದ ಅರ್ಧ ಓದಿದ ಕುತೂಹಲಪೂರ್ಣವಾದ ಕಾದಂಬರಿಯನ್ನು ಯಾವನಾದರೂ ಒಬ್ಬ ಆ ಬಾಲಕನ ಹಿತಚಿಂತಕನು ಕಸಿದುಕೊಂಡು ಮುಚ್ಚಿಟ್ಟಾಗ ಆ ಶುಷ್ಕಮುಖದ, ವ್ಯಾಕುಲಭಾವದ ಬಾಲಕನನ್ನು ಒಂದು ಕೋಣೆ ಯಿಂದ ಇನ್ನೊಂದು ಕೋಣೆಗೆ ಹೇಗೆ ಓಡಾಡಿಸುತ್ತಿರುವನೊ ಮತ್ತು ಭಯಮಿಶ್ರಿತ ಅವನ ದೃಷ್ಟಿಯು ಕಳೆದುಕೊಂಡ ವಸ್ತುವನ್ನು ಹುಡುಕು ತ್ತಿರುವುದೊ ಹಾಗೂ ಯಾವ ರೀತಿಯಾಗಿ ಯಾರ ಮೇಲಾದರೂ ಆಗ ಅತ್ಯಂತ ಸಿಟ್ಟಾಗಬೇಕೆಂದು ಅವನಿಗೆ ಇಚ್ಛೆಯಿರುವುದೊ ಅದೇ ರೀತಿ ಯಾಗಿ ಸುರಮಾ ಯಜ್ಞದತ್ತನ ಸಲುವಾಗಿ ಅತ್ಯಂತ ಚಡಪಡಿಸ ತೊಡಗಿದಳು. ಆಕೆಯು ಏನನ್ನು ಹುಡುಕಿ ತೆಗೆಯುವಳೊ, ದೇವರಿಗೇ ಗೊತ್ತು. ಆದರೆ ಆಕೆಗೆ ಕುರ್ಚಿ, ಮೇಜು, ಪಲಂಗ, ಕೋಣೆ, ಅಂಗಳ ಮುಂತಾದ ಎಲ್ಲ ವಸ್ತುಗಳ ಮೇಲೆ ಕೋಪ ಬಂದಿತು. ಬೀದಿಯ ಕಡೆಯ ಪ್ರತಿಯೊಂದು ಕಿಡಿಕಿಯು ಆಕೆಗೆ ಅಪ್ರಿಯವಾಯಿತು. ಒಮ್ಮೆ ಇದರಲ್ಲಿ ಒಮ್ಮೆ ಅದರಲ್ಲಿ ಕುಳಿತುಕೊಂಡು ದಾರಿ ನೋಡತೊಡಗಿದಳು. ಇಷ್ಟರಲ್ಲಿ ಯಜ್ಞದತ್ತ ಕೋಣೆಯೊಳಗೆ ಬಂದ.

" ಏನಾಯಿತು ಪ್ರಕಾಶ ಮಹಾಶಯರೆ ? "

ಪ್ರಕಾಶನ ಮುಖ ಗಂಭೀರವಾಯಿತು.

" ಹುಡುಗೆಯು ಮನಸ್ಸಿಗೆ ಬಂದಳೇ ? "

" ಬಂದಳು. "

" ಮದುವೆಯು ಯಾವಾಗ ? "

" ಬಹುಶಃ, ಇದೇ ತಿಂಗಳಲ್ಲಿ— "

ಆನಂದರಹಿತವಾದ ಉತ್ಸಾಹದಿಂದ ಸುರಮಾ ಸಮೀಪಕ್ಕೆ ಬಂದಳು, ಯಾವ ಬಗೆಯಿಂದಲೂ ಗಲಾಟೆ ಮಾಡಲಿಲ್ಲ; " ಹೇಳು, ನನ್ನಾಣೆಯಾಗಿದೆ, ನಿಜ ಹೇಳು. " ಎಂದಳು.

" ಇದೇನು ಸಂಕಟಪ್ಪ, ನಿಜವನ್ನೇ ಹೇಳುತ್ತಿರುವೆ. "

" ನನ್ನ ಮುಖ, ನನ್ನ ಮುಖ ನೋಡು, ಹೇಳು, ಮನಸ್ಸಿಗೆ ಬಂದಳೇ ? "

" ಹೂಂ. "

ಸುರಮಾಳಿಗೆ ಉತ್ತರವೀಯಲು ಶಬ್ದಗಳೇ ಸಿಗದಾದವು. ಮಗುವು ಬೆದರಿಕೆಯಿಂದ ಅಳುವ ಮೊದಲು ಅತ್ತಿತ್ತ ಕತ್ತನ್ನು ಅಲ್ಲಾಡಿಸಿ ಅರ್ಥಹೀನವಾದ ಮಾತನ್ನು ಆಡಿಬಿಡುವಂತೆ ಸುರಮಾ ಸಹ ಕತ್ತನ್ನು ಅಲ್ಲಾಡಿಸಿ ಗದ್ಗದ ಕಂಠದಿಂದ " ನಾನು ಮೊದಲೇ ಹೇಳಿದ್ದೆ. " ಎಂದಳು.

ಯಜ್ಞದತ್ತ ತನ್ನ ಚಿಂತೆಯಲ್ಲಿಯೆ ಮಗ್ನನಾಗಿದ್ದ; ಆಕೆಯ ಮಾತಿಗೆ ಅರ್ಥವಿರುವುದೇ ಇಲ್ಲವೆಂಬುದನ್ನು ಅರಿಯದಾದ. ಏಕೆಂದರೆ ಸುರಮಾ ಮೊದಲು ' ಹುಡುಗೆಯು ನಿನ್ನ ಮನಸ್ಸಿಗೆ ಬಂದೇ ಬರುವಳು ' ಎಂದು ಹೇಳಿದ್ದೇ ಇಲ್ಲ. ಇನ್ನೊಂದು ಏನೆಂದರೆ ಆಕೆಯು ಸ್ವತಃ ಸಹ ಹುಡುಗೆಯನ್ನು ನೋಡಿರಲಿಲ್ಲ. ಇಷ್ಟು ಬೇಗ ಹುಡುಗೆಯು ಮನಸ್ಸಿಗೆ ಬರುವಳು, ಲಗ್ನ ಮುಹೂರ್ತವೂ ನಿಶ್ಚಿತವಾಗುವುದೆಂದು ಆಕೆಯು

ಬಗೆದಿರಲಿಲ್ಲ. ಆದುದರಿಂದ ಆಕೆಯು ಇಡಿ ದಿನ ತನ್ನ ಕೋಣೆಯಲ್ಲಿ ಕುಳಿತು ಚಿಂತಿಸತೊಡಗಿಳು. ಎರಡು ದಿನಗಳಾದಬಳಿಕ ಯಜ್ಞದತ್ತನಿಗೆ ಬಹಳ ಸಂಗತಿ ತಿಳಿದುಬಂದಿತು. ಅವನೆಂದ "ಸುರೋ, ಈ ಮದುವೆ ಯನ್ನು ಮಾಡಿಸಬೇಡ ಸೋದರಿ."

"ಓಹೋ, ಹೀಗೆಲ್ಲಾದರೂ ಆಗುವುದೇ ? ನಿಶ್ಚಯವಾಗಿ ಬಿಟ್ಟಿದೆಯಲ್ಲ ?"

"ನಿಶ್ಚಯವೇನೂ ಆಗಿಲ್ಲ."

"ಇಲ್ಲ, ಹೀಗೆ ಆಗುವಂತಿಲ್ಲ. ದುಃಖೀ ಹುಡುಗೆ, ಆಕೆಯನ್ನು ಸುಖಪಡಿಸಬೇಕಾಗುವುದು. ಇದನ್ನಾದರೂ ನೀನು ವಿಚಾರ ಮಾಡಿ ನೋಡು. ವಚನ ಕೊಟ್ಟು ಅದನ್ನು ಮುರಿಯುವುದುಚಿತವೇ ?"

ಯಜ್ಞದತ್ತನಿಗೆ ಪ್ರತುಲ ಕುಮಾರಿಯ ಮುಖವು ನೆನಪಿಗೆ ಬಂದಿತು. ಆ ದಿನ ಆ ಕನ್ಯೆಯ ದೊಡ್ಡ ದೊಡ್ಡ ಕಪ್ಪು ಕಪ್ಪಾದ ಕಣ್ಣು ಗಳಲ್ಲಿ ಯಜ್ಞದತ್ತ ಸಹಿಷ್ಣುತೆ ಮತ್ತು ಶಾಂತಭಾವದ ದಟ್ಟವಾದ ಛಾಯೆಯನ್ನು ನೋಡಿದ್ದ. ಇದರಿಂದ ಅವನು ಸುಮ್ಮಗಾದ. ಆದಾಗ್ಯೂ ಅವನು ಬಹಳ ಮಾತುಗಳನ್ನು ಯೋಚಿಸತೊಡಗಿದ. ಸುರಮಾನ ಬಗ್ಗೆಯೇ ಹೆಚ್ಚು ಯೋಚಿಸಿದ. ಮಳೆಗಾಲದ ದಿನಗಳಲ್ಲಿ ಪಾತರಗಿತ್ತಿ ಗಳಿಂದ ಮನೆಯು ತುಂಬಿಹೋಗುವಂತೆ ಅವನ ಮನಸ್ಸು ಚಿಂತೆಗಳಿಂದ ತುಂಬಿಹೋಯಿತು. ಅವನ ಹೃದಯದಲ್ಲಿ ಅಡಗಿದ್ದ ಬಯಕೆಯ ಗುಹೆಯೊಳಗೆ ಏನು ಇದೆಯೆಂಬುದು ಗೊತ್ತಾಗಲೊಲ್ಲದು. ಸುರಮಾ ಆ ದಿನ ಆಡಿದ ಮಾತುಗಳಲ್ಲಿ ಯಾವ ಗುಪ್ತ ಆಕಾಂಕ್ಷೆಯಿದೆಯೆಂಬುದೂ ತಿಳಿಯದಾಯಿತು. ಅವನ ಕಣ್ಣುಗಳ ಎದುರಿಗೆ ಮಂಜು ಕವಿದಂತಾ ಯಿತು. ಅದರಲ್ಲಿ ಸುರಮಾನ ಮುಖವು ಕಾಣಿಸದಂತಾಯಿತು.

× × × ×

೫

ಮದುವೆ ಮಾಡಿಕೊಂಡು ಯಜ್ಞದತ್ತ ಹೆಂಡತಿಯನ್ನು ಮನೆಗೆ ಕರೆದುಕೊಂಡು ಬಂದ. ವಿಕಾರಗ್ರಸ್ತ ರೋಗಿಯ ಮನೆಯಲ್ಲಿ ಯಾರೂ

ಇಲ್ಲದಿದ್ದಾಗ ಅವನು ತನ್ನ ಎಲ್ಲ ಶಕ್ತಿಗಳನ್ನು ಸಂಗ್ರಹಿಸಿಕೊಂಡು ನೀರಿನ ಕೊಡದ ಬಳಿಗೆ ಹೋಗಿ ಅದನ್ನು ಅಪ್ಪಿಕೊಂಡು ಕುಳಿತು ಕೊಳ್ಳುವಂತೆ ಸುರಮಾ ಮನೆಗೆ ಬಂದ ಸೊಸೆಯನ್ನು ಅಪ್ಪಿಕೊಂಡಳು. ತನ್ನ ಬಳಿಯಲ್ಲಿದ್ದ ಎಲ್ಲ ಆಭರಣಗಳನ್ನು ಸುರಮಾ ಸೊಸೆಗೆ ತೊಡಿಸಿ ದಳು, ತನ್ನ ಬಟ್ಟೆಗಳನ್ನೆಲ್ಲ ಆಕೆಯ ಪೆಟ್ಟಿಗೆಯಲ್ಲಿ ತುಂಬಿದಳು. ಒಣ ಮೊಗದಿಂದ ಇಡಿ ದಿನ ಸೊಸೆಯನ್ನು ಸಿಂಗರಿಸುವುದನ್ನು ಕಂಡು ಯಜ್ಞದತ್ತನ ಮುಖವು ಚಿಕ್ಕದಾಯಿತು. ಗಂಭೀರವಾದ ಸ್ವಪ್ನವನ್ನು ಕಂಡು ಸಹಿಸಬಹುದು, ಏಕೆಂದರೆ ಅದು ಅಸಹ್ಯವಾಗುತ್ತಲೆ ಎಚ್ಚ-ರಾಗುವುದು; ಆದರೆ ಎಚ್ಚೆತ್ತಿರುವಾಗಲೂ ಸ್ವಪ್ನವನ್ನು ನೋಡುವಾಗ ಉಸಿರು ಕಟ್ಟತೊಡಗುವುದು, ಅದು ಮುಗಿಯುವುದೇ ಇಲ್ಲ, ನಿದ್ರೆಯಿಂದ ಎಚ್ಚರ ಸಹ ಆಗುವುದಿಲ್ಲ. ಒಮ್ಮೊಮ್ಮೆ ಇದು ಸ್ವಪ್ನವೆಂದು ಎನಿಸು ವುದು, ಒಮ್ಮೊಮ್ಮೆ ಇದು ಸತ್ಯವೆಂದು ಎನಿಸುವುದು. ಪ್ರಕಾಶನಿಗೂ ಇದೇ ಭಾವ ಬರತೊಡಗಿತು ಮತ್ತು ಛಾಯಾಸಿಗೂ ಇದೇ ಭಾವ ಮನದಲ್ಲಿ ಏಳತೊಡಗಿತು. ಒಂದು ದಿನ ತನ್ನ ಕೋಣೆಗೆ ಆಕೆಯನ್ನು ಕರೆದು ಯಜ್ಞದತ್ತ "ಛಾಯಾ!" ಎಂದ.

"ಏನು ಯಜ್ಞಣ್ಣ?"

"'ಪ್ರಕಾಶ' ಎಂದು ಎನ್ನಲಿಲ್ಲ?"

ತಲೆಬಾಗಿಸಿ ಸುರಮಾ ಎಂದಳು "ಪ್ರಕಾಶ."

ಯಜ್ಞದತ್ತ ತನ್ನ ಎರಡೂ ಕೈಗಳನ್ನು ಮುನ್ನೀಡಿ ಎಂದ "ಬಹಳ ದಿನಗಳಿಂದ ಹತ್ತರ ಬಂದಿಲ್ಲ, ಬಾ."

ಸುರಮಾ ಒಂದು ಬಾರಿ ಅವನ ಮುಖದ ಕಡೆಗೆ ನೋಡಿದಳು. ಮರುಕ್ಷಣವೇ ನುಡಿದುಬಿಟ್ಟಳು—"ಓಹೋ, ನಾನಾದರೂ ಎಂಥವಳು! ಸೊಸೆಯನ್ನು ಒಬ್ಬಾಕೆಯನ್ನೇ ಬಿಟ್ಟು ಬಂದಿದ್ದೇನೆ!" ಹೀಗೆನ್ನುತ್ತ ಎನ್ನುತ್ತ ಆಕೆಯು ಓಡಿಹೋದಳು.

ಕೋಪ ಬಂದಾಗ ಯಾವನಾದರೂ ಒಬ್ಬನ ಮುಖದ ಮೇಲೆ

ಒಂದು ಏಟನ್ನು ಕೊಟ್ಟಾಗ ಅವನು ಶಾಂತಚಿತ್ತದಿಂದ ಕ್ಷಮೆ ತೋರಿಸಿ ಹೋದರೆ ಆಗ ಮನಸ್ಸು ಎಷ್ಟು ವ್ಯಥೆಪಡುವುದೊ ಅಷ್ಟೇ ಅದೇ ಬಗೆಯ ವ್ಯಥೆಯು ಯಜ್ಞದತ್ತನಿಗೆ ಆಗತೊಡಗಿತು. ಅವನಿಗೆ ಆಗಾಗ್ಗೆ ತಾನು ಅಪರಾಧ ಮಾಡಿರುವೆನೆಂದೂ ಸುರಮಾ ಅದನ್ನು ಕ್ಷಮಿಸುತ್ತಿರುವ ಳೆಂದೂ ಎನಿಸತೊಡಗಿತು.

ಸುರಮಾ ಸರ್ವಾಲಂಕಾರ ಭೂಷಿತಾ ಸೊಸೆಯನ್ನು ಅವನ ಬಳಿಯಲ್ಲಿ ಬಲತ್ಕಾರದಿಂದ ಕುಳ್ಳಿರಿಸುತ್ತಿದ್ದಳು. ಸಾಯಂಕಾಲವಾಗು ತ್ತಲೇ ಬಾಗಿಲು ಮುಚ್ಚಿ ಹೊರಗಿನಿಂದ ಬೀಗ ಹಾಕಿಬಿಡುತ್ತಿದ್ದಳು. ಯಜ್ಞದತ್ತ ಗಲ್ಲದ ಮೇಲೆ ಕೈಯಿಟ್ಟುಕೊಂಡು ಯೋಚಿಸುತ್ತಿದ್ದ. ಸೊಸಗೂ ಸ್ವಲ್ಪ ತಿಳಿಯುತ್ತಿರುವುದು, ಬುದ್ಧಿವಂತೆ ಆಕೆಯಿಲ್ಲ, ಆದರೂ ಆಕೆಯು ನಾರಿಯೇ. ಸಾಧಾರಣ ಸ್ತ್ರೀ–ಬುದ್ಧಿಯಿಂದ ದೇವರು ಯಾರನ್ನೂ ವಂಚಿತ ಮಾಡಿಲ್ಲ. ಆಕೆಯೂ ಇಡಿ ರಾತ್ರಿ ಎಚ್ಚೆತ್ತಿ-ರುತ್ತಿದ್ದಳು.

ಮದುವೆಯಾಗಿ ಇವ್ರುತ್ತಿಗೆ ಎಂಟು ದಿನಗಳೂ ಕಳೆದಿಲ್ಲ. ಇಷ್ಟ ರಲ್ಲಿಯೇ ಒಂದು ದಿನ ಬೆಳಿಗ್ಗೆ ಯಜ್ಞದತ್ತ ಸುರಮಾಳನ್ನು ಕೂಗಿ ಕರೆದು "ವರ್ಧಮಾನದಲ್ಲಿ ಸೋದರತ್ತೆಗೆ ಸೊಸೆಯನ್ನು ತೋರಿಸಿ ಬರುವೆ" ಎಂದ.

× × × ×

ದಾಮೋದರ ನದಿಯ ಆಚೆಯ ದಂಡೆಯ ಮೇಲೆ ಅತ್ತೆಯ ಊರು. ಅತ್ತೆಯ ಮನೆಯನ್ನು ಮುಟ್ಟುತ್ತಲೆ ಯಜ್ಞದತ್ತ ಎಂದ "ಅತ್ತೆಮ್ಮಾ, ಸೊಸೆಯನ್ನು ಕರೆದುಕೊಂಡು ಬಂದಿರುವೆ ನೋಡು."

"ಮದುವೆ ಮಾಡಿಕೊಂಡೆಯೇನೊ! ದೀರ್ಘಾಯುಷಿಯಾಗಿರು! ಸಾವಿರುವರ್ಷ ಬದುಕು! ಚಂದ್ರನಂತಹ ಸೊಸೆ, ಬಹಳ ಚೆನ್ನಾಗಿ ಇದ್ದಾಳೆ. ಎಲ್ಲರಂತೆ ಸಂಸಾರ ಸಾಗಿಸು ಮಗು."

"ಆದ್ದರಿಂದಲೇ ಸುರಮಾ ಬಲವಂತ ಮಾಡಿ ಮದುವೆ ಮಾಡಿ ದ್ದಾಳೆ."

"ಹಾಂ ! ಸುರೋ ಮದುವೆ ಮಾಡಿದ್ದಾಳೆಯೆ? "

"ಹೌದು, ಆಕೆಯೇ ಮಾಡಿದ್ದಾಳೆ. ನನ್ನ ದೈವವೇ ಕೆಟ್ಟುದು. ಈಕೆಯೊಡನೆ ಸಂಸಾರ ಸಾಗಿಸುವುದೇ ಕಷ್ಟ."

"ಏಕೆ ? ಅದೇಕೆ ?"

"ಅತ್ತೆಮ್ಮ, ನನ್ನ ಗಣ ನರ ಗಣ; ಈಕೆಯ ಗಣ ರಾಕ್ಷಸ ಗಣ. ಇಬ್ಬರೂ ಕೂಡಿದ್ದರೆ ಬದುಕುವುದೇ ಕಷ್ಟ" ಎಂದು ಜ್ಯೋತಿಷಿ ಹೇಳಿರುವ. ಇದು ನಿನಗೆ ಗೊತ್ತಿಲ್ಲವೇನು ಅತ್ತೆಮ್ಮ ?

"ಮಗೂ, ಹೀಗೇನೋ ? ''

"ಆಗ ಅವಸರದಲ್ಲಿ ಈ ಎಲ್ಲ ಸಂಗತಿಗಳನ್ನು ನೋಡಲಿಕ್ಕಾಗಲಿಲ್ಲ. ಇನ್ನು ಈಕೆ ನಿನ್ನ ಹತ್ತಿರವೇ ಇರುವಳು. ತಿಂಗಳೊಂದಕ್ಕೆ ಐವತ್ತು ರೂಪಾಯಿ ಕಳಿಸಿಕೊಡುವೆನು. ಇಷ್ಟರಿಂದ ಸುಖವಾಗಿ ಉಪಜೀವನ ಸಾಗಲಿಕ್ಕಿಲ್ಲವೇನು ಅತ್ತೆಮ್ಮ ? ''

''ನಡೆಯುವುದು. ಹಳ್ಳಿಯಲ್ಲಿ ಅಷ್ಟೇನೂ ತೊಂದರೆಯಾಗುವುದಿಲ್ಲ. ಚಂದ್ರನಂತಿದ್ದಾಳೆ ಸೊಸೆ. ದೊಡ್ಡವಳಾಗಿರುವಳು, ಅಲ್ಲವೇನೊ ಜಗ್ಗೂ, ಶಾಂತಿ ಮಾಡಿಸುವುದರಿಂದ ನಡೆಯದೇನು ?

"ಮಾಡಿಸಿದರೆ ನಡೆಯಬಹುದು. ನಾನು ಭಟ್ಟಾಚಾರ್ಯರನ್ನು ವಿಚಾರಿಸಿ ನಿನಗೆ ತಿಳಿಸುವೆ."

"ಹಾಗೇ ಮಾಡು ಮಗೂ."

ಸಾಯಂಕಾಲ ಯಜ್ಞದತ್ತ ತನ್ನ ಹೆಂಡತಿಯನ್ನು ಹತ್ತಿರ ಕರೆದು "ಹಾಗಾದರೆ, ನೀನು ಇಲ್ಲಿಯೇ ಇರು" ಎಂದ.

ಆಕೆಯು ತಲೆಯಲ್ಲಾಡಿಸಿ "ಹೂಂ" ಎಂದಳು.

"ನಿನಗೇನಾದರೂ ಬೇಕಾದರೆ ನನಗೆ ತಿಳಿಸು."

'' ಒಳ್ಳೇದು. ''

''ನಿನಗೆ ಪತ್ರ ಬರೆಯಲು ಬರುವುದೇನು ? ''

“ಇಲ್ಲ.”

“ಹಾಗಾದರೆ ಹೇಗೆ ತಿಳಿಸುವಿ?”

ನವವಧುವು ತನ್ನ ಹರಿಣದಂತಹ ಕಣ್ಣುಗಳನ್ನು ಗಂಡನ ಮೇಲೆ ನೆಟ್ಟು ಸುಮ್ಮನೆ ನಿಂತಳು. ಯಜ್ಞದತ್ತ ಮುಖ ತಿರುಗಿಸಿಕೊಂಡು ಹೊರಟು ಹೋದ.

ಅತ್ತೆಯ ಮನೆಯಲ್ಲಿ ಸೊಸೆಯು ನಸುಕಿನಲ್ಲೇ ಎದ್ದು ಮನೆಯ ಕೆಲಸಕ್ಕೆ ತೊಡಗುವಳು. ಕುಳ್ಳಿರಲು ಆಕೆಯು ಕಲಿತಿಲ್ಲ. ತೀರ ಹೊಸಬಳಾಗಿದ್ದರೂ ಪರಿಚಿತರಂತೆ ಮನೆಯ ಎಲ್ಲ ಕೆಲಸ-ಬೊಗಸೆ ಮಾಡಲಾರಂಭಿಸಿದಳು. ಎರಡು ಮೂರು ದಿನಗಳಲ್ಲಿಯೆ ಅತ್ತೆಯು ತಿಳಿದುಕೊಂಡಳು—ಇಂತಹ ಹುಡುಗೆಯರು ಅಂತಿಂತಹರ ಹೊಟ್ಟೆಯಿಂದ ಹುಟ್ಟಿ ಬರುವುದಿಲ್ಲ.

ಸೊಸೆಯ ಬಳಿಯಲ್ಲಿ ಬಹಳ ಆಭರಣಗಳಿರುವುವು. ಬೀದಿಯ ಹೆಂಗುಸರೆಲ್ಲರೂ ನೋಡಲು ಬರುವರು. ಒಬ್ಬರು ಕೇಳಿದರು “ಯಾರು ಕೊಟ್ಟಿರುವರು ಅಮ್ಮ? ನಿಮ್ಮ ತಂದೆಯವರೇನು?”

“ನನಗೆ ತಂದೆತಾಯಂದಿರು ಇಲ್ಲ. ನಾದಿನಿಯು ಕೊಟ್ಟಿರುವಳು.”

ಒಬ್ಬಿಬ್ಬರೊಡನೆ ಹೆಚ್ಚು ಸಖ್ಯವಾದ ಬಳಿಕ ಅವರು ಮೆಲ್ಲಗೆ ಒಂದೊಂದಾಗಿ ರಹಸ್ಯವನ್ನು ಅರಿತುಕೊಳ್ಳಲು ಯತ್ನಿಸತೊಡಗಿದರು. ಅವರು ಕೇಳತೊಡಗಿದರು “ನಿನ್ನ ನಾದಿನಿಯು ಬಹಳ ಶ್ರೀಮಂತರ ಮನೆಯವಳೇನು?”

“ಹೌದು.”

“ಎಲ್ಲ ಒಡವೆಗಳೂ ಆಕೆಯವೇ ಏನು?”

“ಎಲ್ಲವೂ ಆಕೆಯವೇ.”

“ಆಕೆಯು ಧರಿಸುವುದಿಲ್ಲವೇನು?”

“ವಿಧವೆ. ಆದ್ದರಿಂದ ಧರಿಸುವುದಿಲ್ಲ.”

" ಆಕೆಯ ವಯಸ್ಸು ಎಷ್ಟು ಕೆಳದಿ ? "

" ನಮಗಿಂತ ಸ್ವಲ್ಪ ದೊಡ್ಡಾಕೆಯಿರಬಹುದು. ಆಕೆಯೆ ಬಲವಂತ ಮಾಡಿ ತನ್ನ ಅಣ್ಣನ ಕೂಡ ನನ್ನ ಮದುವೆ ಮಾಡಿಸಿರುವಳು."

" ನಿನ್ನ ಗಂಡ ಆಕೆಯ ಮಾತನ್ನೆಲ್ಲ ಮನ್ನಿಸುವನಲ್ಲವೆ ? "

" ಹೌದು; ಆಕೆಯು ಸತಿ ಲಕ್ಷ್ಮಿ. ಎಲ್ಲರೂ ಆಕೆಯನ್ನು ಪ್ರೀತಿಸುವರು. "

× × × ×

೬

ಅಟ್ಟದಮೇಲಿನ ಕಿಡಿಕಿಯಿಂದ ಯಜ್ಞದತ್ತ ತಿರುಗಿ ಬಂದುದನ್ನು ಸುರಮಾ ನೋಡಿದಳು. ಆದರೆ ಅವನ ಕೂಡ ಸೊಸೆಯು ಇರಲಿಲ್ಲ. ಮನೆಯನ್ನು ಪ್ರವೇಶಿಸುತ್ತಲೇ ಆಕೆಯು ಕೇಳಿದಳು " ಅಣ್ಣಾ, ಸೊಸೆಯನ್ನು ಎಲ್ಲಿ ಬಿಟ್ಟು ಬಂದೆ ? "

" ಸೋದರತ್ತೆಯ ಮನೆಯಲ್ಲಿ. "

" ಸಂಗಡ ಕರೆದುಕೊಂಡೇಕೆ ಬರಲಿಲ್ಲ ? "

" ಇರಲಿ ಅಲ್ಲೇ ಇನ್ನೂ ಕೆಲವು ದಿನ. ಆಮೇಲೆ ಕರೆದುಕೊಂಡು ಬಂದರಾಯಿತು. "

ಈ ಮಾತು ಸುರಮಾನ ಎದೆಯನ್ನು ನೆಟ್ಟಿತು. ಇಬ್ಬರೂ ಸುಮ್ಮಗಾದರು. ಪ್ರೀತಿಯವರಲ್ಲಿ ಅಕಸ್ಮಾತ್ ಜಗಳವಾಗುವುದರಿಂದ ಕೆಲವು ದಿವಸ ಹೇಗೆ ಮಾತನಾಡದೆ ಇರುವರೊ ಹಾಗೆಯೆ ಈ ಇಬ್ಬರೂ ಕೆಲವು ದಿವಸ ಮಾತನಾಡದೆ ಸುಮ್ಮಗೆ ಇದ್ದರು. ಆದರೆ ಇಷ್ಟೇ ಮಾತಾಗುತ್ತಿದ್ದಿತು—ಸುರಮಾ ಹೇಳುತ್ತಿದ್ದಳು " ಸ್ನಾನಮಾಡಿ ಊಟಮಾಡು, ಹೊತ್ತಾಗಿ ಹೋಗಿರುವುದು. " ಯಜ್ಞದತ್ತ ಎನ್ನುತ್ತಿದ್ದ " ಹೂಂ, ಸ್ನಾನಕ್ಕೆ ಹೊರಡುವೆ. "

ಹೀಗೆಯೆ ಕೆಲವು ದಿನಗಳು ಕಳೆದುವು.

ಒಟ್ಟಿಗೆ ಇದ್ದುಕೊಂಡು ಈ ರೀತಿಯಾಗಿ ಸಂಸಾರವನ್ನು ಸಾಗಿಸಲಾಗುವುದಿಲ್ಲ. ಪುನಃ ಒಕ್ಕಟ್ಟು ಸುರುವಾಯಿತು. ಯಜ್ಞದತ್ತ ಪುನಃ ಪ್ರೀತಿಯಿಂದ ಆಕಯನ್ನು ಕರೆಯತೊಡಗಿದ 'ಏ ಛಾಯಾ!' ಆದರೆ ಛಾಯಾ ಈಗ ಅವನನ್ನು 'ಪ್ರಕಾಶ' ಎಂದು ಕೂಗುವುದಿಲ್ಲ. ಒಮ್ಮೊಮ್ಮೆ 'ಯಜ್ಞಣ್ಣ' ಎನ್ನುವಳು, ಒಮ್ಮೊಮ್ಮೆ ಕೇವಲ 'ಅಣ್ಣಾ' ಎಂದು ಕರೆಯುವಳು.

ಒಂದು ದಿನ ಸುರಮಾ "ಅಣ್ಣ, ಮೂರು ತಿಂಗಳಾಗುತ್ತ ಬಂದುವು. ಸೊಸೆಯನ್ನು ಕರೆದುಕೊಂಡು ಬಾ" ಎಂದಳು.

ಯಜ್ಞದತ್ತ ಈ ಮಾತನ್ನು ಮರೆಮಾಸುತ್ತಿದ್ದ—"ಬರುವಳು." ಸುರಮಾ ಅವನ ಮನದ ಭಾವವನ್ನು ತಿಳಿದು ಸುಮ್ಮನಾಗುತ್ತಿದ್ದಳು.

ಅತ್ತೆಯಿಂದ ಆಗಾಗ್ಗೆ ಪತ್ರ ಬರುತ್ತಿರುವುದು; "ಸೊಸೆಗೆ ಮಲೇರಿಯಾ ಜ್ವರ ಬಂದಿದೆ. ಚಿಕಿತ್ಸೆ ಮಾಡಿಸುವುದು ಅತ್ಯವಶ್ಯ" ಎಂದು ಬರೆಯುತ್ತಿದ್ದಳು. ಯಜ್ಞದತ್ತ ಅರ್ಥಮಾಡಿಕೊಂಡು ಹೆಚ್ಚು ರೂಪಾಯಿಗಳನ್ನು ಕಳಿಸುತ್ತಿದ್ದ. ಬಳಿಕ ಒಂದು ತಿಂಗಳ ವರೆಗೆ ವಿಶೇಷವೇನೂ ಬರೆಯುತ್ತಿರಲಿಲ್ಲ. ಇಷ್ಟರಲ್ಲಿ ಒಂದು ದಿನ ಅಕಸ್ಮಾತ್ ಒಂದು ಪತ್ರ ಬಂದಿತು— "ಅತ್ತೆ ತೀರಿಕೊಂಡಳು."

ಯಜ್ಞದತ್ತ ವರ್ಧಮಾನಕ್ಕೆ ಹೋದ. ಹೋಗುವಾಗ ತನ್ನಾಣೆ-ಯಿಟ್ಟುಕೊಂಡು ಸೊಸೆಯನ್ನು ಕರೆದುಕೊಂಡು ಬರಬೇಕೆಂದು ಸುರಮಾ ಹೇಳಿದ್ದಳು.

ವರ್ಧಮಾನದಲ್ಲಿ ಯಜ್ಞದತ್ತ ಹದಿಮೂರನೆಯ ದಿನದ ಕರ್ಮವನ್ನೂ ತೀರಿಸಿದ. ಬಳಿಕ ಒಂದು ದಿನ ಅಂಗಳದಲ್ಲಿ ಊರಿಗೆ ಹೊರಡುವ ಮಾತನ್ನು ಯೋಚಿಸುತ್ತ ನಿಂತಿದ್ದ. ಅಲ್ಲಿಯೆ ಬತ್ತದ ಅಂಬಾರಖಾನೆಯ ಬಳಿಯಲ್ಲಿ ಅವನ ಹೆಂಡತಿ ನಿಂತಿದ್ದಳು, ಆಕೆಯ ಕಡೆಗೆ ದೃಷ್ಟಿಯು ಹೋಯಿತು. ನಾಲ್ಕು ಕಣ್ಣುಗಳಾಗುತ್ತಲೇ ಅವನು ಆಕೆಯನ್ನು ಸನ್ನೆಯಿಂದ ಹತ್ತಿರ ಕರೆದ.

ಹೆಂಡತಿಯು ಹತ್ತಿರ ಬಂದಳು.

" ಏಕೆ? "

" ತಮಗೆ ಸ್ವಲ್ಪ ಹೇಳಬೇಕಾಗಿದೆ. "

" ಒಳ್ಳೇದು, ಹೇಳು. "

ಹೆಂಡತಿಯು ಉಗುಳು ನುಂಗುತ್ತ " ನನಗೆ ಏನಾದರೂ ಬೇಕಾಗಿದ್ದರೆ— ನೀನು ನನಗೆ ಬರೆ— " ಎಂದಳು.

" ಹೌದು, ಹೌದು. ಏನು ಬೇಕಾಗಿದೆ ಹೇಳು. "

" ಮನೆಯಲ್ಲಿ ಎಲ್ಲರೂ ನಾನು ಕುಲನಾಶಕಳು ಎಂದು ಎನ್ನುವರು. ಆದುದರಿಂದ ಇಲ್ಲಿ ಇರಲು ನನಗೆ ಮನಸ್ಸಿಲ್ಲ. "

" ಎಲ್ಲಿರ ಬಯಸುವಿ? "

" ಕಲಕತ್ತೆಯೊಳಗೆ ಒಬ್ಬ ಸಭ್ಯಗೃಹಸ್ಥರ ಮನೆ ಸಿಕ್ಕರೆ— ನನಗೆ ಎಲ್ಲ ಕೆಲಸಗಳೂ ಬರುವುವು. "

" ನೀನು ನಿನ್ನ ಮನೆಗೆ ಹೋಗುವಿಯಾ? "

" ನನ್ನ ಮನೆ? ಅದೆಲ್ಲಿದೆ? ಅಲ್ಲಿ ಅವರು ಇರಗೊಡುವರೇ? "

ಯಜ್ಞದತ್ತ ತನ್ನ ಕೈಯಿಂದ ಹೆಂಡತಿಯ ಮುಖವನ್ನು ಮೇಲಕ್ಕೆತ್ತಿ " ನನ್ನ ಮನೆಗೆ ಬರುವೆಯಾ? " ಎಂದ.

" ಬರುವೆ. "

" ಸುರಮಾ ನಿನಗಾಗಿ ಬಹಳ ಚಡಪಡಿಸುತ್ತಿರುವಳು. "

ಸುರಮಾನ ಹೆಸರು ಕೇಳಿದ ಕೂಡಲೆ ಅತ್ಯಂತ ಆನಂದದಿಂದ ಆಕೆಯ ಮುಖ ಅರಳಿತು. ಆಕೆಯೆಂದಳು—

" ಜೀಜೀ, ನನ್ನನ್ನು ನೆನಸುತ್ತಿರುವಳೇ? "

" ಬಹಳ. "

" ಹಾಗಾದರೆ ನಡೆಯಿರಿ. "

ಅನ್ಯರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತ ಮಾಡಲಿಕ್ಕೆ ಬುದ್ಧಿಯೇ ಬರುವುದಿಲ್ಲ, ಇಂತಹ ಒಂದು ಮನೆಯ ಜನರೂ ಜಗತ್ತಿ-ನಲ್ಲಿರುವರು. ಅವರು ತಮ್ಮ ಬಗ್ಗೆ ಸಲಹೆಯನ್ನು ತೆಗೆದುಕೊಳ್ಳುವುದೂ ಆವಶ್ಯಕವೆಂದು ತಿಳಿಯುವುದಿಲ್ಲ. ಈ ಬಗೆಯ ಒಂದು ಸಹಜವಾದ ಬುದ್ಧಿಯೂ ಅವರಲ್ಲಿರುವುದು. ಈ ಹೊಸ ಸೊಸೆ ಇಂತಹ ಜನರ ಗುಂಪಿಗೆ ಸೇರಿದಾಕೆ. ಆಕೆಯು ತನ್ನ ವಿಚಾರವನ್ನು ತಾನೇ ಮಾಡಿಕೊಳ್ಳುವಳು. ಬೇರೆಯವರನ್ನು ಕೇಳುವುದಿಲ್ಲ. ಆಕೆಯು ಯೋಚಿಸಿ ನುಡಿದಳು “ ನಿಮಗೆ ಎಲ್ಲಿ ಅಮಂಗಳವಾಗುವುದೊ ಎಂಬ ಭಯ ಇರುವುದು ನನಗೆ. ಆದರೆ ಇನ್ನು ನಾನು ಇರುವುದಾದರೂ ಎಲ್ಲಿ? ಹೌದು, ನಾನು ಇನ್ನು ಕೆಳಗೇ ಇರುವೆ. ಕೆಲಸಬೊಗಸೆಗೂ ಅಲ್ಲಿ ಇರುವುದರಿಂದ ಅನುಕೂಲವಾಗುವುದು. ”

“ ಮೇಲೆ ನಿನಗಿರಲು ಕೋಣೆಯಿಲ್ಲವೇನು ? ”

“ ಇದೆ, ಆದರೆ ನಾನು ಕೆಳಗಿನ ಕೋಣೆಯಲ್ಲಿಯೇ ಇರುವೆ. ”

ಯಜ್ಞದತ್ತ ಪುನಃ ಯಾವ ಮಾತನ್ನೂ ಆಡಲಿಲ್ಲ. ತನ್ನ ಹೆಂಡತಿಯ ಮಾತುಗಳು ಮೂರ್ಖರ ಮಾತುಗಳಂತೆ ಇಲ್ಲವೆಂದು ಅವನಿಗೆ ತಿಳಿಯಿತು. ಆಗ ಅವನು “ ನೀನು ಕುಲನಾಶಕಳಲ್ಲ, ರಾಕ್ಷಸಗಣ ವೊದಲಾದುದೆಲ್ಲವೂ ಸುಳ್ಳು. ಈ ಸುಳ್ಳು ಹೇಳಲಿಕ್ಕೆ ಏನು ಕಾರಣವಾಯಿತು ? ಇದನ್ನು ಹೇಳುವುದು ಹೇಗೆ ? ” ಎಂದು ಯೋಚಿಸಿದ. ಇದನ್ನು ಹೇಳಿದರೆ ‘ ಆಕೆಯು ತನ್ನ ಹಿಂದಿನ ಮತ್ತು ಮುಂದಿನ ವ್ಯವಹಾರದಲ್ಲಿ ಸಾಮಂಜಸ್ಯವನ್ನು ತರಬಲ್ಲಳೇ ? ’ ಎಂಬುದರ ಬಗ್ಗೆ ಅವನಿಗೆ ವಿಶ್ವಾಸವುಂಟಾಗದಾಯಿತು.

× × × ×

೭

ಸೊಸೆಯು ಬಂದುದನ್ನು ಸುರಮಾ ನೋಡಿದಳು. ತೀಕ್ಷ್ಣವಾದ ಉದ್ವೇಗವನ್ನು ತಡೆದುಕೊಂಡು ಈಗ ಆಕೆಯು ಸ್ವಲ್ಪ ಸ್ಥಿರಳಾದಳು.

ಆದುದರಿಂದ ಈಗ ಸೊಸೆಯನ್ನು ನೋಡಲು ಅಷ್ಟು ಆತುರಪಡಲಿಲ್ಲ. ಶಾಂತವಾಗಿ ಗಂಭೀರವಾಗಿ ಪ್ರಿಯ ಭಾಷೆಯನ್ನಾಡಿದಳು, ಬಾಯಿಂದಲ್ಲ. ಅಂತಃಕರಣದೊಳಗಿನ ಮಂಗಳ ಕಾಮನೆಯು ಆಕೆಯ ಒಣಗಿದ ಮುಖದ ಮೇಲೆ ಪುನಃ ಬೆಳಕನ್ನು ತಂದಿತು. ಆಕೆಯೆಂದಳು "ಪ್ರಫುಲ, ಅಲ್ಲಿ ನಿನ್ನ ಆರೋಗ್ಯವು ಚೆನ್ನಾಗಿರಲಿಲ್ಲವೇ ? "

"ಆಗಾಗ್ಗೆ ಜ್ವರ ಬರುತ್ತಿದ್ದುವು."

ಸುರಮಾ ಆಕೆಯ ಹಣೆಯ ಮೇಲಿನ ಬೆವರನ್ನು ಒರೆಸಿ "ಇಲ್ಲಿ ಚಿಕಿತ್ಸೆ ಮಾಡಿಸಿದರೆ ಎಲ್ಲವೂ ಗುಣವಾಗುವುದು." ಎಂದಳು.

ಕೆಳಗಿನ ಕೋಣೆಯು ಸೊಸೆಗಾಗಿ ಸ್ವಚ್ಛವಾಗುತ್ತಿರುವುದೆಂಬ ಸುದ್ದಿಯು ಸುರಮಾಳಿಗೆ ಮಧ್ಯಾಹ್ನ ಹತ್ತಿತು; ಅವಮಾನದಿಂದ ಆಕೆಯ ಕಣ್ಣುಗಳಲ್ಲಿ ನೀರು ಬಂದವು. ಅವನ್ನು ಹಾಗೂ ಹೀಗೂ ತಡೆದು ಯಜ್ಞದತ್ತನ ಕಡೆಗೆ ಆಕೆಯು ಹೋದಳು ಮತ್ತು ಕೇಳಿದಳು. "ಅಣ್ಣಾ, ಸೊಸೆಯು ಕೆಳಗೆ ಮಲಗುವಳೇ?"

ಅವನು ಪುಸ್ತಕದ ಕಡೆಗೇ ನೋಡುತ್ತ "ಆಕೆಯು ಹಾಗೆಯೇ ಹೇಳುತ್ತಾಳೆ."

'ನೀನು ಏನೂ ಹೇಳುವುದಿಲ್ಲವೇ'

'ನಾನೇನು ಹೇಳಲಿ? ಯಾರ ಮನಸ್ಸಿಗೆ ಹೇಗೆ ಬರುವುದೋ ಅವರು ಹಾಗೇ ಮಾಡಲಿ.'

ಸುರಮಾಳಿಗೆ ನಾಚಿಕೆಯಾಯಿತು. ತನ್ನನ್ನೇ ತಾನು ಧಿಕ್ಕರಿಸಿ ಕೊಳ್ಳತೊಡಗಿದಳು ಅವನ ಎದುರಿಗೆ ಅತ್ತುಬಿಟ್ಟಳು ಮತ್ತು ಭರದಿಂದ ಹೊರಗೆ ಬಿಟ್ಟಳು

ಮೇಲಿನ ಈ ಸಂಗತಿ ಕೆಳಗೆ ಮುಟ್ಟಲಿಲ್ಲ.

ಹೊಸ ಸೊಸೆಯು ಮನೆಗೆಲಸಕ್ಕೆ ಹೊಸದಾಗಿ ಸುರುವು ಮಾಡಿದಳು. ಕ್ರಮೇಣವಾಗಿ ಆಕೆಯು ಸುರಮಾನ ಕೆಲಸವನ್ನೂ ತನ್ನ ವಶಕ್ಕೆ ತೆಗೆದುಕೊಂಡಳು. ಆದರೆ ಅವಳು ಮೇಲಕ್ಕೆ ಹೋಗುವುದಿಲ್ಲ.

ಪತಿಯನ್ನು ಭೇಟಿಯಾಗುವುದಿಲ್ಲ. ಸುರಮಾ ಕೂಡ ಸಾವಕಾಶವಾಗಿ ಆಗಾಗ್ಗೆ ಮೇಲಕ್ಕೆ ಹೋಗುವುದನ್ನು ಬಿಟ್ಟುಬಿಟ್ಟಳು ಸೊಸೆಯು ಪ್ರಫುಲ್ಲ–ಗಂಭೀರವದನೆಯಾಗಿ ಕೆಲಸಮಾಡುತ್ತಿದ್ದಳು ಮತ್ತು ಸುರಮಾ ಆಕೆಯ ಹತ್ತಿರ ಕುಳ್ಳಿರುತ್ತಿದ್ದಳು. ಒಂದನೆಯದಾಗಿ ಕೆಲಸ ಮಾಡುವುದರಲ್ಲಿ ಎಷ್ಟು ಆನಂದವಿದೆಯೆಂಬುದನ್ನು ತೋರಿಸುತ್ತಿದ್ದಳು, ಎರಡನೆಯದಾಗಿ ಕೆಲಸದ ಹರಿಯುವ ಹೊಳೆಯಲ್ಲಿ ಎಷ್ಟು ದುಃಖವನ್ನು ಹರಿಸಬಹುದೆಂಬುದನ್ನು ತಿಳಿದುಕೊಳ್ಳುತ್ತಿದ್ದಳು. ಇಬ್ಬರೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ, ಆದಾಗ್ಯೂ ಇರ್ವರಲ್ಲಿಯೂ ಪರಸ್ಪರ ಸಹಾನುಭೂತಿಯು ಹಗಲು ಇಮ್ಮಡಿ, ರಾತ್ರಿ ನಾಲ್ಮಡಿ ಬೆಳೆಯತೊಡಗಿತು.

ಆಗಾಗ್ಗೆ ಹೊಸ ಸೊಸೆಗೆ ಜ್ವರ ಬರುತ್ತಿದ್ದುವು; ಒಂದೆರಡು ದಿನ ಲಂಘನ ಮಾಡುವುದರಿಂದ ಅವು ಇಲ್ಲದಂತಾಗುತ್ತಿದ್ದವು. ಔಷಧ ತೆಗೆದುಕೊಳ್ಳುವುದರ ಕಡೆಗೆ ಆಕೆಯ ಪ್ರವೃತ್ತಿಯೆ ಇರಲಿಲ್ಲ. ಔಷಧ ಆಕೆಯು ಕುಡಿಯುವುದೇ ಇಲ್ಲ. ಆಗ ಕೆಲಸವನ್ನು ದಾಸದಾಸಿಯರೇ ಮಾಡುವರು, ಸುರಮಾನಿಂದ ಆಗುವುದಿಲ್ಲ. ಮಾಡಬೇಕೆಂದು ಇಚ್ಛೆಯಾದರೂ ಆಕೆಗೆ ಶಕ್ತಿಯಿಲ್ಲ.

ಚಿನ್ನದಂತಹ ಪ್ರತಿಮೆ ಸುರಮಾ. ಈಗ ಆ ಚಿನ್ನದ ಬಣ್ಣ ಆಕೆಗೆ ಉಳಿದಿಲ್ಲ, ಆ ಕಾಂತಿಯೂ ಇಲ್ಲ. ಇಷ್ಟು ಲಾವಣ್ಯ ಈ ಎರಡು ತಿಂಗಳಲ್ಲಿ ಎಲ್ಲಿಗೆ ಹೋಯಿತೊ! ಸೊಸೆಯು ಆಗಾಗ್ಗೆ ಎನ್ನುವಳು "ನೀನು ದಿನದಿನಕ್ಕೆ ಹೀಗೇಕೆ ಆಗುತ್ತಿರುವೆ ನಾದಿನಿ—ಅಮ್ಮಾ"

"ನಾನು! ಒಳ್ಳೇದು ಅತ್ತಿಗೇ, ನಾನು ಪ್ರಕೃತಿಯನ್ನು ಸುಧಾರಿಸಿಕೊಳ್ಳಲಿಕ್ಕೆ ಬೇರೆ ಕಡೆಗೆ ಎಲ್ಲಿಗಾದರೂ ಹೋದರೆ ನಿನಗೆ ತೊಂದರೆ ಆಗುವುದಿಲ್ಲ ತಾನೆ?"

"ಆಗುವುದು, ಅಗತ್ಯವಾಗಿ ಆಗುವುದು. ಆಗುವುದಿಲ್ಲವೇಕೆ?"

"ಹಾಗಾದರೆ ಹೋಗುವುದಿಲ್ಲ."

"ಇಲ್ಲ ನಾದಿನಿ–ಅಮ್ಮಾ, ನೀನು ಹೋಗಬೇಡ, ಇಲ್ಲಿಯೆ ಚಿಕಿತ್ಸೆ ಮಾಡಿಸಿಕೊ, ಗುಣಹೊಂದು."

ಸುರಮಾ ಸ್ನೇಹದಿಂದ ಆಕೆಯ ಹಣೆಯನ್ನು ಮುದ್ದಿಟ್ಟಳು.

ಒಂದು ದಿನ ಸುರಮಾ ಯಜ್ಞದತ್ತನಿಗೆ ತಟ್ಟೆಯನ್ನು ಬಡಿಸುತ್ತಿದ್ದಳು. ಯಜ್ಞದತ್ತ ಆಕೆಯ ಮಲಿನ, ಒಣಗಿದ ಮುಖಭಾವವನ್ನು ಸತೃಷ್ಣ ನಯನಗಳಿಂದ ನೋಡುತ್ತಿದ್ದ. ಸುರಮಾ ಕತ್ತೆತ್ತಿ ನೋಡುತ್ತಲೇ ನೀಳವಾದ ಉಸಿರ್ಗರೆದು "ನಾನು ಸತ್ತುಹೋದರೆ ಒಳ್ಳೆಯದು ಎಂದು ಮನಸ್ಸಿನಲ್ಲಿ ಬರುತ್ತದೆ." ಎಂದ.

"ಏಕೆ?" ಎನ್ನುತ್ತಿರುವಾಗಲೇ ಸುರಮಾನ ಕಣ್ಣುಗಳಲ್ಲಿ ನೀರು ತುಂಬಿಬಂದುವು.

"ಇನ್ನೂ ಎಷ್ಟು ದಿನ ಈ ಜೀವದ ಭಾರವನ್ನು ಹೊತ್ತುಕೊಂಡು ಇರಬೇಕಾಗುವುದೊ ಎಂಬ ಅಂಜಿಕೆ."

ಬಂದೂಕಿನ ಗುಂಡಿನೇಟನ್ನು ತಿಂದ ವನ್ಯ ಮೃಗವು ಆಕಾಶದಲ್ಲಿ ಓಡಿ ಹೋಗಬಯಸುವಂತೆ— ಆಕಾಶವು ಅದಕ್ಕೇನೂ ಆಗಬೇಕಾಗಿಲ್ಲ, ಆದುದರಿಂದ ಆ ಆಶ್ರಯಶೂನ್ಯ ಮರಣಾಸನ್ನ ಜೀವವು ಕೊನೆಗೆ ಚಿರ-ಆಶ್ರಯವನ್ನು ಕೊಡುವ ಪೃಥ್ವಿಯನ್ನೇ ಎದೆಗಪ್ಪಿಕೊಂಡು ಪ್ರಾಣ ಬಿಡುವಂತೆ ಸುರಮಾ ಚಡಪಡಿಸುತ್ತ ಮೊದಲು ಆಗಸದ ಕಡೆಗೆ ನೋಡಿದಳು, ಅದೇ ರೀತಿಯಾಗಿ ಭೂಮಿಯ ಮೇಲೆ ಬಿದ್ದು ಹೊರಳಾಡುತ್ತ ಅಳತೊಡಗಿದಳು "ಯಜ್ಞಣ್ಣ, ಕ್ಷಮಿಸು, ನಾನು ನಿನ್ನ ವೈರಿ. ನನ್ನನ್ನು ಎಲ್ಲಿಗಾದರೂ ಕಳಿಸಿಕೊಡು, ನೀನು ಸುಖಿಯಾಗಿರು."

ದಾಸಿಯೆಲ್ಲಿ ಬಂದುಬಿಡುವಳೊ ಎಂಬ ಅಂಜಿಕೆಯಿಂದ ಯಜ್ಞ-ದತ್ತ ಆಕೆಯ ಕೈ ಹಿಡಿದು ಎಬ್ಬಿಸಿ ಕುಳ್ಳಿರಿಸಿದ ಮತ್ತು ಸ್ನೇಹದಿಂದ ಆಕೆಯ ಕಂಬನಿಗಳನ್ನು ಒರೆಸುತ್ತ "ಛಿಃ, ಹುಡುಗಾಟಿಕೆ ಮಾಡಬೇಡ." ಎಂದ.

ಸುರಮಾ ತನ್ನ ಕಂಬನಿಗಳನ್ನು ಒರೆಸಿಕೊಳ್ಳುತ್ತ ಲಗುಬಗೆಯಿಂದ ತನ್ನ ಕೋಣೆಗೆ ಹೋದಳು ಮತ್ತು ಒಳಗೆ ಹೋಗಿ ಅದರ ಬಾಗಿಲನ್ನು ಮುಚ್ಚಿಕೊಂಡಳು.

× × × ×

೮

ಬಳಿಕ ಒಂದು ದಿನ ಸುರಮಾ ಸೊಸೆಯನ್ನು ತನ್ನ ಬಳಿಗೆ ಬರಸೆಳೆದುಕೊಂಡು "ಪ್ರತೂ, ಯಜ್ಞಣ್ಣ ನಿನಗೆ ಎಂದಾದರೂ ಏನನ್ನಾದರೂ ಹೇಳಿರುವನೇನು ?" ಎಂದಳು.

ಸೊಸೆಯು ಸಹಜವಾಗಿ ಉತ್ತರವಿತ್ತಳು "ಏನು ಹೇಳುವರು ?"

"ಹಾಗಾದರೆ ನೀನು ಅವನ ಬಳಿಗೆ ಏಕೆ ಹೋಗುವುದಿಲ್ಲ? ಅವನ ಬಳಿಗೆ ಹೋಗಲಿಕ್ಕೆ ನಿನಗೆ ಮನಸ್ಸು ಆಗುವುದಿಲ್ಲವೇನು ?"

ಸೊಸೆಗೆ ಮೊದಲು ನಾಚಿಕೆಯೆನಿಸತೊಡಗಿತು; ಬಳಿಕ ತಲೆ ಬಾಗಿಸಿಕೊಂಡು "ಮನಸ್ಸಾಗುವುದು ಜೀಜೀ, ಆದರೆ ಹೋಗುವುದಕ್ಕೇ ಆಗುವುದಿಲ್ಲ !" ಎಂದಳು ಪ್ರತುಲಳು.

"ಅದೇಕೆ ಪ್ರತೂ ?"

"ನಿಮಗೆ ನೆನಪಿಲ್ಲವೆ ?"

"ಇಲ್ಲವಲ್ಲ !"

"ಬಹುಶಃ ನೀವು ಮರೆತಿರಬಹುದು ಜೀಜೀ; ನನ್ನದು ರಾಕ್ಷಸ ಗಣ, ಅವರದು ನರ ಗಣ. ಆದುದರಿಂದಲೇ—" ಸುರಮಾನ ಮೈನ ನಿರುಗಳು ಎದ್ದು ನಿಂತುವು. ಆಕೆಯೆಂದಳು "ಇದು ಸುಳ್ಳು, ಪ್ರತೂ, ಸುಳ್ಳು."

"ಸುಳ್ಳು ?"

ಕಣ್ಣುಗಳನ್ನರಳಿಸಿಕೊಂಡು ಸುರಮಾನ ಮುಖದ ಕಡೆಗೆ ಪ್ರತುಲಳು ನೋಡುತ್ತ ನಿಂತಳು. ಸುರಮಾನ ಮೈಮೇಲೆ ಆಗಾಗ್ಗೆ ಮುಳ್ಳು ಬರತೊಡಗಿದುವು. ಆಕೆಯೆಂದಳು "ಸುಳ್ಳು, ಸುಳ್ಳು, ತೀರ ಸುಳ್ಳು ಪ್ರತೂ !"

"ಅವರು ಸುಳ್ಳು ಹೇಳುವರೆಂದು ವಿಶ್ವಾಸವಾಗುವದಿಲ್ಲ."

ಸುರಮಾನಿಗೆ ಇನ್ನು ಸಹಿಸಲಾಗಲಿಲ್ಲ. ಆಕೆಯು ಪ್ರತುಲಳನ್ನು

ತನ್ನ ಕರಪಾಶದಲ್ಲಿ ಬಿಗಿದಪ್ಪಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು ಮತ್ತು ಎನ್ನತೊಡಗಿದಳು "ಪ್ರತೂ, ನಾನು ಮಹಾ ಪಾಪಿ."

ಪ್ರತುಲಳು ತನ್ನನ್ನು ಕರಪಾಶದಿಂದ ಬಿಡಿಸಿಕೊಂಡು ಮೆಲ್ಲಗೆ "ಏಕೆ ಜೀಜೀ?" ಎಂದಳು.

"ಓಃ, ಇನ್ನು ಅದನ್ನು ಆಲಿಸಬೇಡ. ಅದನ್ನು ನಾನು ಹೇಳಲಾರೆ."

× × × ×

ಬಿರುಗಾಳಿಯಂತೆ ಸುರಮಾ ಯಜ್ಞದತ್ತನ ಬಳಿಗೆ ಹೋದಳು. ಆಕೆಯೆಂದಳು "ಸೊಸೆಯನ್ನು ಈ ರೀತಿಯಾಗಿ ಅಜ್ಞಾನದಲ್ಲಿಡುವುದೇ? **ಓಃ,** ಎಂತಹ ಭಯಂಕರ ಸಟಿವಾದಿಯು ನೀನು!"

ಯಜ್ಞದತ್ತ ದಿಙ್ಮೂಢನಾದ.

"ಇದೇನು ಸುರೋ!"

"ನೀನು ಕೃತವಿದ್ಯ, ಛೀಃ ಛೀಃ, ನಿನಗೆ ನಾಚಿಕೆ ಬರಬೇಕಾಗಿತ್ತು."

ಯಜ್ಞದತ್ತನಿಗೆ ಈ ಮಾತುಗಳ ಅರ್ಥವಾಗಲಿಲ್ಲ; ಕೇವಲ ಕಟು ನುಡಿಗಳನ್ನು ಆಲಿಸತೊಡಗಿದ.

"ಏನೆಂದು ಯೋಚಿಸಿ ಮದುವೆ ಮಾಡಿಕೊಂಡಿದ್ದೆ?— ಏನೆಂದು ಬಗೆದು ಆಕೆಯನ್ನು ಬಿಟ್ಟಿರುವಿ?— ನನಗಾಗಿ? ನನ್ನ ಮುಖವನ್ನು ನೋಡಿ ಈ ರೀತಿಯಾಗಿ ಮೋಸ ಮಾಡುತ್ತ ಬಂದಿರುವೆಯಾ?"

"ಸುರಮಾ, ನೀನು ಹುಚ್ಚಿಯಾಗಿರುವೆಯಾ?"

"ನಾನು ಹುಚ್ಚಿ? ನಿನಗಿಂತಲೂ ಹೆಚ್ಚು ಜ್ಞಾನ ನನ್ನಲ್ಲಿದೆ— ನನ್ನನ್ನು ಮತ್ತೆಲ್ಲಿಗಾದರೂ ಕಳಿಸಿಕೊಡು!" ಎನ್ನುವಾಗ ಸುರಮಾನ ಕಣ್ಣುಗಳು ಕೆಂಪಾದುವು. ತೇಕುತ್ತ ಆಕೆಯೆಂದಳು "ಒಂದು ಕ್ಷಣವೂ ಇಲ್ಲಿ ಇರಲಾರೆ. ಛೀಃ ಛೀಃ—"

ಯಜ್ಞದತ್ತ ಚೀರಿ "ಏನೆನ್ನುತ್ತೀ?" ಎಂದ.

" ಎನ್ನುವೆ— ನೀನು ಮೋಸಗಾರ, ಅಸತ್ಯವಾದಿ, ಠಕ್ಕ!"

ನಿಮಿಷಮಾತ್ರದಲ್ಲಿ ಯಜ್ಞದತ್ತನ ಮಸ್ತಿಷ್ಕಕ್ಕೆ ಬೆಂಕಿಯಿಟ್ಟಂತಾಯಿತು. ಕಾರಣವಿಲ್ಲದೆ ಅವನ ಆತ್ಮ ಹೊರಗೆ ಬಂದು ಯುದ್ಧಕ್ಕಾಗಿ ಆಹ್ವಾನಿಸುತ್ತಿರುವಂತೆ ಅವನಿಗೆನಿಸಿತು! ಜ್ಞಾನಶೂನ್ಯವಾಗಿ ಅವನು ಮೇಜಿನ ಮೇಲೆ ಇದ್ದ ಭಾರವಾದ 'ರೂಲರ್' ಎತ್ತಿಕೊಂಡು ಗಟ್ಟಿಯಾಗಿ ಚೀರುತ್ತ "ನಾನು ಅಧಮ, ನಾನು ಠಕ್ಕ, ನಾನು ಅಸತ್ಯವಾದಿ! ಇಗೋ ಅದಕ್ಕಾಗಿ ಈ ಪ್ರಾಯಶ್ಚಿತ್ತ ಮಾಡಿಕೊಳ್ಳುವೆ!" ಎನ್ನುತ್ತ ಸಂಪೂರ್ಣ ಶಕ್ತಿಯಿಂದ ತನ್ನ ತಲೆಗೆ ಹೊಡೆದುಕೊಂಡ. ತಲೆಯೊಡೆಯಿತು, ರಕ್ತವು ಧಾರೆಯಾಗಿ ಹರಿಯತೊಡಗಿತು. ಸುರಮಾ ಅಸ್ಫುಟ ಸ್ವರದಲ್ಲಿ ಕೂಗಿದಳು " ಅಮ್ಮಾ!" ಬಳಿಕ ಅವಳು ಎಚ್ಚರದಪ್ಪಿ ಭೂಮಿಯ ಮೇಲೆ ಬಿದ್ದಳು. ಯಜ್ಞದತ್ತ ಇದನ್ನು ನೋಡಿದ. ಅವನ ಮುಖವು ಪೂರ್ಣ ನೆತ್ತರಮಯವಾಗಿದೆ, ಕಣ್ಣಲ್ಲಿ ರಕ್ತ ಹೋಗಿದ್ದುದರಿಂದ ಎಲ್ಲವೂ ಅಸ್ಪಷ್ಟ ಕಾಣಿಸುತ್ತಿರುವುದು. ಅವನು ಉನ್ಮತ್ತನಂತೆ ಎನ್ನತೊಡಗಿದ " ಈಗ ಏಕೆ?" ಇಷ್ಟರಲ್ಲಿ ಯಾರೊ ಹಿಂದಿನಿಂದ ಬಂದು ಅವನನ್ನು ಹಿಡಿದರು. ತಿರುಗಿ ನೋಡಿದ— ಹೆಂಡತಿ. ಅಳುತ್ತ ಎಂದ " ನೀನು ಬಂದೆಯಾ?"

ಆಕೆಯ ಹೆಗಲಮೇಲೆ ತಲೆಯಿಟ್ಟು ಅವನೂ ಎಚ್ಚರದಪ್ಪಿದ.

ಸುರಮಾ ಬಿರುಗಾಳಿಯಂತೆ ಮೇಲೆ ಬಂದಾಗ, ಆಕೆಯ ಹಿಂದಿನಿಂದಲೇ ಪ್ರತುಲಳೂ ಬಂದು ಕೋಣೆಯ ಹೊರಗೆ ನಿಂತಿದ್ದಳು. ಆಕೆಯು ಎಲ್ಲ ಮಾತುಗಳನ್ನೂ ಕೇಳಿದಳು, ಎಲ್ಲವನ್ನೂ ನೋಡಿದಳು. ಬಹಳಷ್ಟು ಸತ್ಯವು ಆಕೆಯ ಮಿದುಳಿನಲ್ಲಿ ಸೂರ್ಯನ ಪ್ರಕಾಶದಂತೆ ಸ್ಪಷ್ಟವಾಗಿ ಕಾಣಿಸಿತು. ಆಕೆಯ ಹೃದಯದ ಸ್ಪಂದನವೂ ವೇಗದಿಂದ ನಡೆಯತೊಡಗಿತು. ಕಣ್ಣುಗಳು ಕತ್ತಲುಗೂಡಿಸತೊಡಗಿದ್ದುವು. ಆದಾಗ್ಯೂ ಆಕೆಯು ತನ್ನನ್ನು ಸಂಬಾಳಿಸಿಕೊಂಡು ಈ ವಿಪತ್ತಿನಲ್ಲಿ ಪತಿಯನ್ನು ತನ್ನ ತೊಡೆಯ ಮೇಲೆ ತೆಗೆದುಕೊಂಡಳು, ಅವನ ತಲೆಗೆ ತನ್ನ ಹೆಗಲಿನ ಆಶ್ರಯವಿತ್ತಳು. ಪ್ರತುಲಳು ಮೂರ್ಖಳೆ? ಏನನ್ನೂ

ಅರಿಯದ ಬಾಲಿಕೆಯೆ? ಈಕೆಯ ಬಗ್ಗೆ ಅತ್ತೆಯು ಆಡಿದ ಮಾತುಗಳು ಸಟೆಯೆ?

× × × ×

೯

ಆರು ದಿನಗಳ ನಂತರ ಎಚ್ಚರ ಬಂದಿತು ಸುರಮಾನಿಗೆ. ಆಕೆಯು ದಾಸಿಯನ್ನು ಕೇಳಿದಳು "ಅಣ್ಣನ ಪ್ರಕೃತಿ ಹೇಗಿದೆ?" ದಾಸಿಯು ಉತ್ತರವಿತ್ತಳು "ಚೆನ್ನಾಗಿರುವುದು."

"ನಾನು ನೋಡಿ ಬರಲಾ?" ಎನ್ನುತ್ತ ಸುರಮಾ ಎದ್ದಳು. ಪುನಃ ಅಲ್ಲಿಯೆ ಮಲಗಿದಳು. ದಾಸಿಯೆಂದಳು "ನೀವು ಇನ್ನೂ ಅಶಕ್ತರಾಗಿರುವಿರಿ, ಇನ್ನೂ ಜ್ವರ ಬರುತ್ತಿರುವುವು, ಏಳಬೇಡಿರಿ. ಡಾಕ್ಟರರೂ ಎಬ್ಬಿಸಬೇಡವೆಂದು ಹೇಳಿರುವರು."

ತನ್ನನ್ನು ನೋಡಲಿಕ್ಕೆ ಯಜ್ಞಣ್ಣ ಬರುವ, ಸೊಸೆ ಬರುವಳು ಎಂದು ಬಗೆದಳು. ಒಂದು ದಿನವಾಯಿತು, ಎರಡು ದಿನಗಳಾದುವು, ಹೀಗೆಯೆ ಒಂದು ವಾರವು ಕಳೆದುಹೋಯಿತು. ಯಾರೂ ಬರಲಿಲ್ಲ. ಯಾರೂ ಕಾಳಜಿಯನ್ನು ಸಹ ತೆಗೆದುಕೊಳ್ಳಲಿಲ್ಲ— ಪರವೆಯನ್ನು ಸಹ ಮಾಡಲಿಲ್ಲ.

ಜ್ವರ ಈಗ ಬರುವುದಿಲ್ಲ, ಆದರೆ ಅಶಕ್ತತೆಯು ಬಹಳಿರುವುದು. ಈಗ ಏಳಲು ಪ್ರಯತ್ನಿಸಿದರೆ ಏಳಬಲ್ಲಳು. ಆದರೆ ಅತ್ಯಂತ ಅಭಿಮಾನದ ಮೂಲಕ ಏಳಲು ಪ್ರವೃತ್ತಿಯೇ ಆಗಲಾರದಾಗಿರುವುದು. ಆಕೆಯು ತನ್ನ ಮನದಲ್ಲೇ ಮಿಡುಕಿ ಮಿಡುಕಿ ಅಳತೊಡಗಿದಳು. ತನ್ನ ಕಣ್ಣುಗಳನ್ನು ತಾನೇ ಒರೆಸಿಕೊಳ್ಳುತ್ತ ಯೋಚಿಸುವಳು— ತನ್ನ ಪ್ರಕಾಶ ಮತ್ತು ಛಾಯೆಯ ಕತೆಯನ್ನು ಕುರಿತು.

ಬೆಳ್ಳ ಬೆಳಕು ಮತ್ತು ದಟ್ಟ ನೆಳಲು ಇವನ್ನು ತೆಗೆದುಕೊಂಡು ಅವರು ಆಡತೊಡಗಿದ್ದರು, ಈಗ ಬೆಳಕು ಮುಳುಗುತ್ತ ಸಾಗಿರುವುದು. ಮಧ್ಯಾಹ್ನದ ಸೂರ್ಯ ಪಶ್ಚಿಮದ ಕಡೆಗೆ ಒಲೆದಿರುವ, ಆದುದರಿಂದಲೇ

ದಟ್ಟವಾದ. ನೆಳಲು ಅಸ್ಪಷ್ಟ ಮತ್ತು ವಿಸ್ತೃತವಾಗುತ್ತ ಪ್ರೇತದಂತೆ ಕಂಕಾಲವಾಗಿರುವುದು. ಆ ನೆಳಲು ಅಜ್ಞಾತ ಅಂಧಕಾರದ ಕಡೆಗೆ ಅದರಲ್ಲಿ ವಿಲೀನವಾಗಲು ಸರಿಯುತ್ತ ಸಾಗಿರುವುದು. ಅಳುತ್ತ ಅಳುತ್ತ ಸುರಮಾ ಪವಡಿಸಿದಳು.

ಆಕೆಯ ದೇಹದ ಮೇಲೆ ಬಿಸಿ ಕೈಯನಿಟ್ಟು ಯಾರೋ ಕೂಗಿದರು " ಜೀಜೀ." ಸುರಮಾ ಎದ್ದು ಕುಳಿತಳು ಮತ್ತು ಎಂದಳು " ಇದೇನು ಪ್ರತೂ ? "

ಆಕೆಯ ಕಣ್ಣುಗಳು ಕೆಂಪಗಾಗಿದ್ದುವು; ಮುಖವು ಒಣಗಿದ್ದಿತು ಮತ್ತು ತುಟಿಗಳು ಕಪ್ಪಾಗಿದ್ದುವು ಮಸಿಯಂತೆ. ಸುರಮಾ ಕೇಳಿದಳು " ಏನು ಪ್ರತೂ, ಏನಾಗಿರುವುದು ನಿನಗೆ? "

" ಏನಾಗಿರುವುದು ನನಗೆ? ನೀವು ಈ ಮನೆಗೆ ನನ್ನನ್ನು ತಂದಿದ್ದಿರಿ, ಆದ್ದರಿಂದಲೇ ಹೇಳ ಬಂದಿರುವೆ ಜೀಜೀ, ನನಗೆ ರಜೆ ಕೊಟ್ಟುಬಿಡಿ, ನಾನು ಹೋಗುವೆ— "

" ಏಕೆ ತಂಗೀ, ಎಲ್ಲಿಗೆ ಹೋಗುವಿ? "

ಪ್ರತೂ ಸುರಮಾನ ಚರಣಗಳ ಮೇಲೆ ತಲೆಯಿಟ್ಟು ಭೂಮಿಯ ಮೇಲೆ ಮಲಗಿಬಿಟ್ಟಳು.

ಆಕೆಯ ದೇಹ ಕಾಯ್ದು ಹೋಗಿದ್ದಿತೆಂಬುದು ಸುರಮಾನಿಗೆ ತಿಳಿಯಿತು. ಆಕೆಯೆಂದಳು " ಇದೇನು ! ನಿನಗೆ ಜ್ವರ ಬಹಳ ಬಂದಿವೆ." ಇಷ್ಟರಲ್ಲಿ ದಾಸಿಯೊಬ್ಬಳು ಚೀರುತ್ತ ಬಂದು ನುಡಿದಳು " ಜೀಜೀ, ಸೊಸೆಯು ಎಲ್ಲಿಗೆ ಹೋದಳು? ಅಮ್ಮಮ್ಮ, ಜ್ವರ ಬಂದು ಎಚ್ಚರದಪ್ಪಿ-ರುವಾಗಲೇ ಓಡಿ ಬಂದಿರುವಳು. ಇವೊತ್ತಿಗೆ ಎಂಟು ದಿನಗಳು ಆದುವು, ಎಚ್ಚರದಪ್ಪಿ ಮಲಗಿರುವಳು. ಅಮ್ಮಮ್ಮ, ಹೇಗೆ ಬಂದಳು ಇಲ್ಲಿಗೆ? "

"ಎಂಟು ದಿನಗಳಿಂದ ಜ್ವರ ! ಡಾಕ್ಟರರು ನೋಡುತ್ತಿರುವರೇನು?"

" ಯಾರೂ ಇಲ್ಲ ಜೀಜೀ, ಯಾರೂ ನೋಡುವುದಿಲ್ಲ. ಮೊನ್ನೆ

ಸೊಸೆಯು ನಳದ ಕೆಳಗೆ ತಲೆ ಇಟ್ಟುಕೊಂಡು ಒಂದು ಗಂಟೆ ಕುಳಿತಿದ್ದಳು; ಬೇಡವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ''

× × × ×

ಸಾಯಂಕಾಲವಾಗುವ ಮೊದಲು ಸುರಮಾ ಯಜ್ಞದತ್ತನ ಕೋಣೆಗೆ ಹೋಗಿ ಅತ್ತುಬಿಟ್ಟಳು—'' ಅಣ್ಣ, ಅತ್ತಿಗೆ ಇನ್ನು ಬದುಕುವುದು ಕಷ್ಟ. ''

'' ಬದುಕುವುದು ಕಷ್ಟ? ಏನಾಗಿರುವುದು ? ''

'' ನನ್ನ ಕೋಣೆಗೆ ಬಂದು ನೋಡು ಅಣ್ಣ, ಅತ್ತಿಗೆ ಇನ್ನು ಬದುಕುವುದು ಕಷ್ಟ. ''

ಇಬ್ಬರು ಮೂವರು ಡಾಕ್ಟರರು ಬಂದು ನೋಡಿ ಎಂದರು '' ಕಸುವಿನಿಂದ 'ಬಾಯ್' ಬಂದಿರುವುದು. '' ಇಡಿ ರಾತ್ರಿ ಅವರು ನಿಷ್ಫಲ ಪರಿಶ್ರಮ ಮಾಡಿ ಬೆಳಗಾಗುತ್ತಲೇ ಹೋಗಿಬಿಟ್ಟರು.

ಇಡಿ ರಾತ್ರಿ ಯಜ್ಞದತ್ತ ದಿಂಬಿನ ಬಳಿ ಕುಳಿತಿದ್ದ. ಎಷ್ಟೋ ಬಾರಿ ಮುಖದ ವರೆಗೆ ಮುಖವನ್ನು ಒಯ್ದು, ಆದರೆ ಸೊಸೆಯು ತನ್ನ ಗಂಡನನ್ನು ಗುರುತಿಸದಾದಳು.

ಡಾಕ್ಟರರು ಹೋದ ಬಳಿಕ ಯಜ್ಞದತ್ತ ಅತ್ತುಬಿಟ್ಟ '' ಒಂದು ಬಾರಿಯಾದರೂ ಕಣ್ತೆರೆದು ನೋಡೇ, ಒಂದು ಬಾರಿಯಾದರೂ ಕ್ಷಮಿಸಿದೆನೆಂದು ಹೇಳೇ ' ಎಂದು.

ಸುರಮಾ ಕಾಲಬಳಿ ಬಟ್ಟೆಯಲ್ಲಿ ಮುಖವನ್ನು ಮುಚ್ಚಿಕೊಂಡು ಅಸ್ಫುಟ ದನಿಯಿಂದ '' ಅತ್ತಿಗೇ, ಇಂತಹ ಶಿಕ್ಷೆಯನ್ನೇಕೆ ಕೊಟ್ಟು ಹೋದೆ? '' ಎಂದಳು.

ಯಾರು ಮಾತನಾಡುವರು? ಸಂಪೂರ್ಣ ಮಾನ, ಅಭಿಮಾನ, ಅವಹೇಳನ, ಅನಾದರವನ್ನು ದೂರ ಸರಿಸಿ ಮೆಲ್ಲಗೆ ಮೆಲ್ಲಮೆಲ್ಲಗೆ ಅವಳು ಅನಂತದಲ್ಲಿ ಬೆರೆತುಹೋದಳು.

× × × ×

ಸುರಮಾ ಎಂದಳು “ ಅಣ್ಣ ಎಲ್ಲಿರುವ?”

ದಾಸಿಯು “ ನಿನ್ನೆ ಅವರು ಪಶ್ಚಿಮದ ಕಡೆಗೆ ಎಲ್ಲಿಗೊ ಹೋಗಿಬಿಟ್ಟಿರುವರು” ಎಂದು ಉತ್ತರವಿತ್ತಳು.

“ ಯಾವಾಗ ಬರುವ? ”

“ ಗೊತ್ತಿಲ್ಲ, ಬಹುಶಃ ಬೇಗ ಬರಲಿಕ್ಕಿಲ್ಲ. ”

“ ನಾನೆಲ್ಲಿ ಇರುವುದು? ”

“ ನಿಮಗೆ ಎಷ್ಟು ರೂಪಾಯಿಗಳು ಬೇಕೊ ಅಷ್ಟನ್ನು ತೆಗೆದುಕೊಂಡು, ನಿಮ್ಮ ಇಚ್ಛೆ ಬಂದಲ್ಲಿಗೆ ಹೋಗಿ ಇರಬಹುದೆಂದು ಹೇಳಿರುವರು ಮತ್ತು ಕಾರಕೂನರಿಗೆ ನೀವು ಬೇಡಿದಷ್ಟು ಹಣ ನಿಮಗೆ ಕೊಡಲು ಆಜ್ಞೆಯಿತ್ತಿರುವರು. ”

ಸುರಮಾ ಆಕಾಶದ ಕಡೆಗೆ ನೋಡಿದಳು. ನೋಡಿದಳು-- ಜಗತ್ತಿನ ಜ್ಯೋತಿ ನಂದಿ ಹೋಗಿರುವುದು, ಸೂರ್ಯನಿಲ್ಲ, ಚಂದ್ರನಿಲ್ಲ, ಒಂದು ಚಿಕ್ಕೆಯೂ ಇಲ್ಲ. ಅತ್ತ ಇತ್ತ ಅಕ್ಕ ಪಕ್ಕ ನೋಡಿದಳು — ಆ ಅಸ್ಪಷ್ಟ ನೆಳಲೂ ಎಲ್ಲಿಗೊ ಮಾಯವಾಗಿ ಹೋಗಿಬಿಟ್ಟಿರುವುದು— ಸುತ್ತಲೂ ದಟ್ಟವಾದ ಕತ್ತಲು ಕವಿದಿರುವುದು. ಆಕೆಯ ಎದೆಯು ಹಾರಿಕೆಯೂ ನಿಲ್ಲುವುದೇನೊ ಎಂದು ಎನಿಸುತ್ತಿರುವುದು, ಕಣ್ಣಿನ ಬೆಳಕು ಸಹ ಮಂದ ಹಾಗೂ ಸ್ಥಿರವಾಗಲು ಇಚ್ಛಿಸುತ್ತಿರುವುದೊ ಏನೋ ಎಂದು ತೋರುತಿರುವುದು.

ದಾಸಿಯು ಕೂಗಿದಳು “ ಜೀಜೀ ! ”

ಮೇಲಕ್ಕೆ ಕತ್ತೆತ್ತಿ ನೋಡುತ್ತ ಸುರಮಾ ಕೂಗಿದಳು ‘ ಯಜ್ಞಣ್ಣ!’ ಬಳಿಕ ಆಕೆಯು ಮೆಲ್ಲಗೆ ಮೆಲ್ಲಮೆಲ್ಲಗೆ ಉರುಳಿ ಬಿದ್ದಳು.



# ಬಿಲಾಸಿ*

ಎರಡು ಹರದಾರಿ ನಡೆದು ವಿದ್ಯಾರ್ಜನೆ ಮಾಡಿಕೊಳ್ಳಲು ಸಾಲೆಗೆ ಹೋಗುತ್ತಿರುವೆ. ನಾನೊಬ್ಬನೇ ಅಲ್ಲ, ಇನ್ನೂ ಹತ್ತು ಹನ್ನೆರಡು ಹುಡುಗರು ಸಂಗಡ ಬರುವರು. ಹಳ್ಳಿಗಳಲ್ಲಿ ವಾಸಿಸುವವರ ನೂರಕ್ಕೆ ಎಂಬತ್ತರಷ್ಟು ಹುಡುಗರು ಇದೇ ರೀತಿಯಾಗಿ ವಿದ್ಯಾಭ್ಯಾಸಕ್ಕಾಗಿ ಹೋಗಬೇಕಾಗುವುದು. ಇದರಿಂದಾಗುವ ಲಾಭ ಎಷ್ಟೆಂಬುವರ ಲೆಕ್ಕ ವನ್ನು ತೆಗೆಯಬೇಕಾದರೆ ಈ ಮಾತುಗಳನ್ನು ಕುರಿತು ವಿಚಾರಮಾಡ ಬೇಕಾಗುವುದು:—

ಬೆಳಿಗ್ಗೆ ಎದ್ದು ಎಂಟು ಗಂಟೆಯ ಒಳಗೆ ತಿಂಡಿ ತೀರಿಸಿಕೊಂಡು ಮನೆಯಿಂದ ಹೊರಟು ಎರಡು ಹರದಾರಿ ಹೋಗುವುದು, ಎರಡು ಹರದಾರಿ ತಿರುಗಿ ಬರುವುದು ಎಂದರೆ ನಾಲ್ಕು ಹರದಾರಿ ನಡೆಯುವುದು ಎಂದು ಎಂದ ಹಾಗಾಯಿತು. ನಾಲ್ಕು ಹರದಾರಿ ಎಂದರೆ ಎಂಟು ಮೈಲು ಎಂತಲ್ಲ; ಈ ಮಾರ್ಗ ಮಳೆಗಾಲದಲ್ಲಿ ಹದಿನಾರು ಮೈಲು ದೂರವಾದಂತೆ ಆಗುವುದು. ಮಳೆಗಾಲದಲ್ಲಿ ಮಳೆ ಮತ್ತು ಕೆಸರಿನಿಂದ ತುಂಬಿದ ದಾರಿಯಲ್ಲಿ ನಡೆಯಬೇಕಾಗುವುದು. ಬೇಸಿಗೆಯಲ್ಲಂತೂ ಈ ಧೂಳಿನ ಸಾಗರದಲ್ಲಿ ಹುಡುಗರು ಈಸುತ್ತ ಸಾಲೆಗೆ ಹೋಗಬೇಕಾಗು ವುದು. ವಿದ್ಯಾರ್ಥಿಗಳ ಈ ಕಷ್ಟವನ್ನು ನೋಡಿ ಸರಸ್ವತಿ ದೇವಿಯು ಸ್ವತಃ ಸಂತುಷ್ಟಳಾಗಿ ಆಶೀರ್ವಾದ ಮಾಡಿ ವರವನ್ನು ಕೊಡಬೇಕೊ

*ಒಬ್ಬ ಹಳ್ಳಿಯ ಹುಡುಗನ ಡಾಯರಿಯಿಂದ. ಆವನ ನಿಜ ಹೆಸರನ್ನು ತಿಳಿದು ಕೊಳ್ಳುವ ಆವಶ್ಯಕತೆ ಇಲ್ಲ; ಹೇಳಲಿಕ್ಕೂ ಅಪ್ಪಣೆ ಇಲ್ಲ. ಆದುದರಿಂದ ಕೆಲಸ ಸಾಗಿಸ ಲಿಕ್ಕೆ ಸೈಡಾ (ಮುಂಡಿತ ಕೇಶ) ಎಂದು ಇಟ್ಟುಕೊಳ್ಳಿರಿ.

ಅಥವಾ ತನ್ನ ಮುಖವನ್ನು ಮುಚ್ಚಿಕೊಳ್ಳಬೇಕೊ ಎಂಬುದನ್ನು ಯೋಚಿಸಲಾರಳು.

ಬಳಿಕ ಆ ವಿದ್ಯಾರ್ಥಿಗಳ ದಳವು ದೊಡ್ಡದಾದನಂತರ ತಮ್ಮ ಊರಲ್ಲಿಯೆ ಉಳಿಯುವುದೊ ಅಥವಾ ಹೊಟ್ಟೆ ಹೊರಕೊಳ್ಳುವುದಕ್ಕಾಗಿ ಮತ್ತೆಲ್ಲಿಗಾದರೂ ಹೋಗುವುದೊ ಎಂಬುದನ್ನು ಹೇಳಲಾಗದಿದ್ದರೂ ಈ ನಾಲ್ಕು ಹರದಾರಿ ನಡೆದು ವಿದ್ಯಾರ್ಜನೆ ಮಾಡುವುದರಿಂದ ಆತ್ಮಪ್ರಕಾಶವಾಗುವುದರಲ್ಲಿ ಸಂದೇಹವೇನೂ ಇಲ್ಲ. ಹೊಟ್ಟೆಯ ಚಿಂತೆಯಿದ್ದವರ ಮಾತನ್ನು ಬಿಟ್ಟುಬಿಡೋಣ. ಇದು ಇಲ್ಲದವರು ಊರನ್ನು ಬಿಟ್ಟು ಎಲ್ಲಿಗೆ ಹೋಗುವರು? ಅವರೂ ಅಲ್ಲಿಯೆ ಇದ್ದುದಾಗಿದ್ದರೆ ಹಳ್ಳಿಗಳ ಈ ದುಸ್ಥಿತಿಯಾಗುತ್ತಿರಲಿಲ್ಲ!

ಮಲೇರಿಯಾದ ಮಾತನ್ನು ಇಲ್ಲಿ ಎತ್ತುವುದಿಲ್ಲ. ಅದು ಇರಲಿ ಅಲ್ಲಿಯೆ. ನಾಲ್ಕು ಮೈಲು ದೂರ ನಡೆಯುವ ಸಂಕಟದಿಂದ ಪಾರಾಗಿ ಹೋಗುವ ಉದ್ದೇಶದಿಂದ ಎಷ್ಟೋ ಪರಿವಾರದವರು ತಮ್ಮ ಮಕ್ಕಳು—ಮರಿಗಳನ್ನು ಕರೆದುಕೊಂಡು ಪಟ್ಟಣಕ್ಕೆ ಹೋಗುವರು. ಇವರ ಎಣಿಕೆಯನ್ನು ಮಾಡಲಾಗುವುದೇ! ಬಳಿಕ ಹುಡುಗರ ಓದು ಬರೆಹವೂ ಮುಗಿಯುವುದಿಲ್ಲ, ಪಟ್ಟಣದ ಸೌಕರ್ಯಗಳನ್ನು ಬಿಟ್ಟು ತಿರುಗಿ ಬರಲು ಇಚ್ಛೆಯೂ ಆಗುವುದಿಲ್ಲ.

ಇರಲಿ ಬಿಡಿರಿ ಈ ಕಲಸಕ್ಕೆ ಬಾರದ ಮಾತುಗಳು. ನಾನು ಸಾಲೆಗೆ ಹೋಗುವೆ, ಈ ಎರಡು ಹರದಾರಿಯ ನಡುವೆ ನಮ್ಮ ಊರಿನಂತಹ ಇನ್ನೂ ಎರಡು ಮೂರು ಊರುಗಳನ್ನು ದಾಟಿ ಹೋಗಬೇಕಾಗುವುದು. ಯಾರ ತೋಟದಲ್ಲಿ ಮಾವುಗಳು ತೂಗತೊಡಗಿರುವುವು, ಯಾರ ವನದೊಳಗೆ ಹೆಚ್ಚು ಇರುವುವು, ಯಾರ ಹಲಸಿನ ಮರಗಳಲ್ಲಿ ಹಲಸುಗಳು ಹಣ್ಣಾಗಬಂದಿರುವುವು, ಯಾರ ರಸಬಾಳೆಯ ಗೊನೆಗಳು ಕಡಿಯಲು ಯೋಗ್ಯವಾಗಿರುವುವು, ಯಾರ ಮನೆಯ ಮುಂದಿನ ತೋಟದಲ್ಲಿ ಅನನ್ನಾಸದ ಬಣ್ಣವು ಬದಲಾಯಿಸುತ್ತಿರುವುದು, ಯಾರ ಕೆರೆಯ ಮೇಲಿನ ಕಜ್ಜೂರ ವೃಕ್ಷದಿಂದ ಕಜ್ಜೂರ ಕೊಯ್ದು

ತಿನ್ನುವುದರಿಂದ ಹಿಡಿಸಿಕೊಳ್ಳುವ ಪ್ರಸಂಗ ಕಡಮೆ ಬರುವುದು ಮುಂತಾಗ ವಿಷಯಗಳ ಶೋಧನೆಯಲ್ಲಿಯೆ ಬಾಲಕರ ವೇಳೆಯು ಹೊರಟು ಹೋಗುವುದು ಆದರೆ ನಿಜವಾದ ವಿದ್ಯೆ ಎಂದರೆ ಕಮುಸ್ಕಟ್ಕಾದ ರಾಜಧಾನಿಯು ಹೆಸರು ಏನು, ಸೈಬೇರಿಯಾದ ಕಣಿಗಳಲ್ಲಿ ಚಿನ್ನವು ಸಿಕ್ಕುವುದೊ ಇಲ್ಲವೊ ಎಂಬ ವಿದ್ಯೆಯನ್ನು, ಇದೇ ಬಗೆಯ ಇತರ ವಿದ್ಯೆಗಳನ್ನು ಅರಿತುಕೊಳ್ಳಲು ಅವರಿಗೆ ಬಿಡುವೇ ಸಿಕ್ಕದು !

ಇದೇ ಕಾರಣದಿಂದ ಪರೀಕ್ಷೆಯ ಕಾಲಕ್ಕೆ 'ಏಡನ್ ಏನು ಇದೆ ?' ಪ್ರಶ್ನೆ ಕೇಳಿದರೆ 'ಪರ್ಶಿಯಾದ ಬಂದರ' ಎಂದೂ 'ಹುಮಾಯೂನನ ತಂದೆಯ ಹೆಸರೇನು ?' ಎಂದು ಪ್ರಶ್ನೆ ಕೇಳಿದರೆ 'ತುಗಲಗಖಾನ' ಎಂಮೂ ಬರೆದು ಬರುತ್ತಿದ್ದೆ. ಇವೊತ್ತಿಗೆ ೪೦ ವಯಸ್ಸು ತುಂಬಿಹೋದ ಬಳಿಕ ಕೂಡ ಆ ಎಲ್ಲ ವಿಷಯಗಳ ಬಗ್ಗೆ ನನ್ನ ಧಾರಣೆಯು ಹಾಗೆಯೆ ಉಳಿದುಕೊಂಡಿರುವುದು ಎಂದು ಎನಿಸುವುದು.— ಬಳಿಕ ತರಗತಿಯು ಮೇಲೇರುವ ದಿವಸ ಮುಖವನ್ನು ಒಣಗಿಸಿಕೊಂಡು ಹಾಗೆಯೆ ತಿರುಗಿ ಮನೆಗೆ ಬರುತ್ತಿದ್ದೆ. ಒಮ್ಮೊಮ್ಮೆ ಇಂಥ ಕೆಲಸಕ್ಕೆ ಬಾರದ ಶಾಲೆಯನ್ನು ಬಿಟ್ಟುಬಿಡಬೇಕೆಂದೂ ಯೋಚಿಸುತ್ತಿದ್ದೆ.

ಊರಿನ ಒಬ್ಬ ಹುಡುಗನ ಕೂಡ ದಾರಿಯಲ್ಲಿ ಒಮ್ಮೊಮ್ಮೆ ಭೇಟಿ ಯಾಗುತ್ತಿದ್ದಿತು. ಅವನ ಹೆಸರು ಮೃತ್ಯುಂಜಯ ಎಂದಿದ್ದಿತು. ವಯಸ್ಸಿ ನಲ್ಲಿ ಅವನು ನಮಗಿಂತ ಹಿರಿಯನಿದ್ದ. ಮೂರನೆಯ ದರ್ಜೆಯಲ್ಲಿ ಓದುತ್ತಿದ್ದ. ಯಾವಾಗ ಅವನು ಮೂರನೆಯ ವರ್ಗಕ್ಕೆ ಸೇರಿದ್ದ ನೆಂಬುದು ನಮ್ಮಲ್ಲಿ ಯಾವ ಹುಡುಗನಿಗೂ ಗೊತ್ತಿರಲಿಲ್ಲ. ಬಹುಶಃ ಇದು ಇತಿಹಾಸ ಸಂಶೋಧಕರ ವಿಷಯವಾಗಿರಬಹುದು; ಆದರೆ ನಾವು ಮಾತ್ರ ಅವನನ್ನು ಮೂರನೆಯ ವರ್ಗದಲ್ಲಿಯೆ ನೋಡುತ್ತ ಬಂದಿರು ವೆವು. ಅವನು ನಾಲ್ಕನೆಯ ದರ್ಜೆಗೆ ಏರಿದ ಮತ್ತು ಅಭ್ಯಾಸ ಅಲ್ಲಿ ಮಾಡಿದ ಎಂಬುದರ ಬಗ್ಗೆ ನಾವೆಂದೂ ಕೇಳಲಿಲ್ಲ. ಎರಡನೆಯ ದರ್ಜೆಗೆ ಏರಿದ ಸುದ್ದಿಯನ್ನೂ ನಾವು ಕೇಳಲಿಲ್ಲ. ಮೃತ್ಯುಂಜಯನಿಗೆ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಯಾರೂ ಇರಲಿಲ್ಲ. ಊರಿನ

ಒಂದು ಕೊನೆಯಲ್ಲಿ ದೊಡ್ಡದೊಂದು ಮಾವಿನ ಮತ್ತು ಹಲಸಿನ ತೋಟವೊಂದು ಅವನಿಗೆ ಇದ್ದಿತು. ಅದರಲ್ಲಿ ಒಂದು ಪಾಳುಬಿದ್ದ ಮನೆ ಇದ್ದಿತು ಮತ್ತು ದೂರದಿಂದ ನೆಂಟಸ್ತಿಕೆಯಲ್ಲಿ ಕಾಕಾ ಆಗುವ ಒಬ್ಬ ಮನುಷ್ಯನಿದ್ದ. ಕಕ್ಕನ ಕೆಲಸವೆಂದರೆ ಒಂದೇ ಒಂದಾಗಿದ್ದಿತು— ತಮ್ಮನ ಮಗನ ನಿಂದೆ ಮಾಡುವುದು "ಅವನು ಗಾಂಜಿ ಸೇದುವ, ಅಫು ಸೇವಿಸುವ, ಏನೇನೊ ಇಂಥ ಕೆಲಸ ಮಾಡುವ." ಇನ್ನೊ ಒಂದು ಕೆಲಸವಿದ್ದಿತು ಕಕ್ಕನದು. ಅದಾವುದೆಂದರೆ 'ಈ ತೋಟದಲ್ಲಿ ನನ್ನದೂ ಅರ್ಧ ಪಾಲು ಇದೆ, ಕೋರ್ಟಿಗೆ ಹೋಗಿ ದಾವಾ ಮಾಡಿ ನನ್ನ ಆಸ್ತಿಯನ್ನು ನನ್ನ ವಶಕ್ಕೆ ತೆಗೆದುಕೊಳ್ಳುವುದು ಇದೆ.' ಎಂದು ಹೇಳುತ್ತ ಊರಲ್ಲಿ ಅಲೆದಾಡುವುದು. ಅದು ಒಂದು ದಿನ ಅವನ ವಶಕ್ಕೆ ಬಂದಿತು, ಆದರೆ ಜಿಲ್ಲೆಯ ಕೋರ್ಟಿನಲ್ಲಿ ದಾವಾ ಮಾಡಿದ್ದ ರಿಂದಲ್ಲ, ಮೇಲಿನ ಕೋರ್ಟಿನ ಹುಕುಮಿನಿಂದ. ಆದರೆ ಇದರ ಬಗ್ಗೆ ಆ ಮೇಲೆ ಹೇಳುವೆ.

ಮೃತ್ಯುಂಜಯು ಸ್ವತಃ ತನ್ನ ಕೈಯಿಂದ ಅಡುಗೆ ಮಾಡಿಕೊಂಡು ಊಟ ಮಾಡುವ, ಮಾವು ಮತ್ತು ಹಲಸು ಬೆಳೆದ ಕೂಡಲೆ ಅವನ್ನು ಯಾರಿಗಾದರೂ ಮಾರಿ ಬಿಡುವ, ಅದರಿಂದ ಬಂದ ಹಣದಲ್ಲಿ ಅವನು ಚೆನ್ನಾಗಿ ಒಂದು ವರ್ಷದ ವರೆಗೆ ತನ್ನ ಉಪಜೀವನವನ್ನು ಸಾಗಿಸಿ ಕೊಳ್ಳುವ. ಯಾವ ದಿನ ಅವನ ಭೇಟಿ ಆಗುತ್ತಿದ್ದಿತೊ ಆ ದಿನ ಅವನು ಹರಕು ಹಳೆ ಪುಸ್ತಕಗಳನ್ನು ಬಗಲಲ್ಲಿ ಇಟ್ಟುಕೊಂಡು ನಮ್ಮಗೆ ಸಾಲೆಗೆ ಹೋಗುತ್ತಿರುವುದನ್ನು ನೋಡುತ್ತಿದ್ದೆ. ಅವನು ಯಾರೊಡನೆಯೂ ಮಾತಾಡುವುದನ್ನು ನಾನೊಂದು ದಿನವೂ ನೋಡಲಿಲ್ಲ. ನಾವೇ ಅವನ ಬಳಿಗೆ ಹೋಗಿ ಮಾತುಕತೆಯಾಡುತ್ತಿದ್ದೆವು. ಇದಕ್ಕೊಂದು ಮುಖ್ಯ ಕಾರಣವಿದ್ದಿತು. ಮಿಠಾಯಿಗಳನ್ನು ಕೊಂಡು ತಿನಿಸುವುದರಲ್ಲಿ ಅವನ ಸರಿಜೋಡಿ ನಮ್ಮ ಊರಲ್ಲಿ ಯಾವನೂ ಇರಲಿಲ್ಲ. ಕೇವಲ ಹುಡುಗರು ಅಷ್ಟೇ ಅಲ್ಲ, ಎಷ್ಟೋ ಹುಡುಗರ ತಂದೆಗಳೂ 'ನಮ್ಮ ಮಗನ ಪುಸ್ತಕ ಕಳೆದು ಹೋಗಿರುವುದು,' 'ಸ್ಕೂಲ್ ಫೀ ಕಳೆದು ಹೋಗಿರುವುದು'

ಎಂದು ತಮ್ಮ ಮಕ್ಕಳಿಂದ ಹೇಳಿಕಳಿಸಿ ಅವನಿಂದ ಹಣ ವಸೂಲು ಮಾಡಿಕೊಳ್ಳುತ್ತಿದ್ದರು. ಇದಕ್ಕಾಗಿ ಅವರು ಕೃತಜ್ಞರಾಗಿರುವುದಂತೂ ದೂರ ಉಳಿಯಿತು, ತಮ್ಮ ಮಕ್ಕಳು ಅವನ ಕೂಡ ಮಾತಾಡಿದ್ದಾರೆಂಬ ಸಂಗತಿಯನ್ನು ಕೂಡ ಊರಿನ ಮಹನೀಯರ ಮುಂದೆ ಒಪ್ಪಿಕೊಳ್ಳಲು ಬಯಸುವುದಿಲ್ಲ, ಇಷ್ಟು ಒಳ್ಳೆಯ ಹೆಸರಿದ್ದಿತು ಮೃತ್ಯುಂಜಯನದು.

ಬಹಳ ದಿನಗಳಿಂದ ಮೃತ್ಯುಂಜಯನ ಭೇಟಿಯಾಗಲಿಲ್ಲ. ಒಂದು ದಿನ ಅವನು ಸಾಯಲಾಗಿರುವನೆಂದು ಕೇಳಿದೆ. ಮತ್ತೊಂದು ದಿನ ಮಾಲಪಾಡೆಯ ಒಬ್ಬ ಮುದುಕ ಮಾಲ*ನು ಅವನಿಗೆ ಚಿಕಿತ್ಸೆ ಮಾಡಿ ಮತ್ತು ಅವನ ಮಗಳು ಬಿಲಾಸಿಯು ಅವನ ಸೇವೆಮಾಡಿ ಮೃತ್ಯುಂಜಯನನ್ನು ಯಮರಾಜನ ದವಡೆಯೊಳಗಿಂದ ಬಿಡಿಸಿಕೊಂಡಿದ್ದಾರೆ ಎಂಬ ಸಮಾಚಾರವನ್ನು ಕೇಳಿದೆ.

ಬಹಳ ದಿನಗಳ ವರೆಗೆ ನಾನು ಅವನ ಮಿಠಾಯಿಗಳ ಸದುಪಯೋಗವನ್ನು ಮಾಡಿರುವೆ. ನನ್ನ ಮನಸ್ಸು ಅವನನ್ನು ಕಾಣುವುದಕ್ಕೆ ಅದೇಕೋ ಚಡಪಡಿಸತೊಡಗಿತು. ಒಂದು ದಿನ ಸಾಯಂಕಾಲ, ಕತ್ತಲಾದ ಬಳಿಕ ಕದ್ದುಮುಚ್ಚಿ ಅವನನ್ನು ನೋಡಲಿಕ್ಕೆ ಹೋದೆ. ಅವನ ಪಾಳು ಮನೆಯಲ್ಲಿ ಗೋಡೆಗಳ ಜೊಂಜಾಟವಿಲ್ಲ. ಸ್ವಚ್ಛಂದವಾಗಿ ಒಳಗೆ ಹೋಗಿ ನೋಡಿದೆ— ಬಾಗಿಲು ತೆರೆದಿದ್ದಿತು, ಒಂದು ಹೆಚ್ಚು ಪ್ರಕಾಶ ಕೊಡುವ ದೀಪವು ಉರಿಯುತ್ತಿದ್ದಿತು, ಎದುರಿಗೆ ಒಂದು ಮಂಚದ ಮೇಲೆ ಹಾಲಿನಂತೆ ಬೆಳ್ಳಗೆ ಇರುವ ಹಾಸುಗೆಯ ಮೇಲೆ ಮೃತ್ಯುಂಜಯ ಮಲಗಿದ್ದ. ಅವನ ಅಸ್ಥಿಪಂಜರ ಮಾತ್ರ ಉಳಿದ ದೇಹವನ್ನು ನೋಡುತ್ತಲೇ ಯಮರಾಜ ತನ್ನ ಪ್ರಯತ್ನದಲ್ಲಿ ಹೆಚ್ಚು ಕಡಮೆ ಏನೂ ಮಾಡಿಲ್ಲ ಎಂದು ಗೊತ್ತಾಯಿತಲ್ಲದೆ, ಅವನಿಗೆ ತನ್ನ ಪ್ರಯತ್ನಕ್ಕೆ ಫಲವು ದೊರಕಲಿಲ್ಲ, ಇಷ್ಟೆಲ್ಲ ಆದುದು ಈ ಹುಡುಗಿಯ ಬಲದಿಂದ ಎಂಬುದೂ ತಿಳಿಯಿತು. ಆಕೆಯು ದಿಂಬಿನ ಬಳಿ ಕುಳಿತು

* ಸರ್ಪ ಕಚ್ಚಿದರೆ ಚಿಕಿತ್ಸೆ ಮಾಡುವ ಒಂದು ಜಾತಿಯವ. ಈ ಜಾತಿಗೆ ಓಝಾ ಎಂದೂ ಹೇಳಬಹುದು.

ಬೀಸಣಿಕೆಯಿಂದ ಗಾಳಿ ಹಾಕುತ್ತಿದ್ದಳು. ಅಕಸ್ಮಾತ್ ಮನುಷ್ಯ ನೊಬ್ಬನು ಬರುವುದನ್ನು ಕಂಡು ಬೆಚ್ಚಿ ಬಿದ್ದು ಎದ್ದು ನಿಂತಳು. ಈ ಹುಡುಗಿಯೆ ಆ ಮುದುಕ ಹಾವಾಡಿಗನ ಮಗಳು—ಬಿಲಾಸಿ. ಆಕೆಯ ವಯಸ್ಸು ಹದಿನೆಂಟು ವರ್ಷದ್ದು ಇದ್ದಿತೊ ಇಪ್ಪತ್ತೆಂಟು ವರ್ಷದ್ದು ಇದ್ದಿತೊ ಎಂಬುದನ್ನು ಅನುಮಾನಿಸಲಿಕ್ಕಾಗಲಿಲ್ಲ. ಆದರೆ, ವಯಸ್ಸು ಎಷ್ಟೇ ಇರಲೊಲ್ಲದೇಕೆ ಆಕೆಯ ಮುಖದ ಕಡೆಗೆ ನೋಡುತ್ತಲೇ ಅನೇಕ ರಾತ್ರಿ ಜಾಗರಣೆ ಮತ್ತು ಸತತ ಪರಿಶ್ರಮದಿಂದ ಕಂದಿ ಕುಂದಿ ಹೋಗಿ-ರುವಳೆಂದು ಎನಿಸುತ್ತಿದ್ದಿತು. ಶರೀರದಲ್ಲಿ ಬಲವೇ ಇರಲಿಲ್ಲ, ಏನೂ ಉಳಿದಿರಲೇ ಇಲ್ಲವೆಂದು ಹೇಳಬಹುದು. ಹೂಬಟ್ಟಲಲ್ಲಿ ನೀರು ಹಾಕಿ ಹಾಕಿ ಎಂಟು ಹತ್ತು ದಿನಗಳಿಂದ ಇಟ್ಟ ತಂಗಳ ಹೂವಿನಂತೆ ಕಾಣುತ್ತಿದ್ದಳು. ಕೈಯು ಸ್ವಲ್ಪ ಮುಟ್ಟುತ್ತಲೇ ಎಲ್ಲಿ ಮುದುಡಕೊಂಡು ಬೀಳುವಳೊ ಏನೊ ಎಂದು ಎನಿಸುವಂತಾಗಿದ್ದಳು.

ಮೃತ್ಯುಂಜಯ ನನ್ನನ್ನು ಗುರುತಿಸಿದ ಮತ್ತು ಎಂದ "ಯಾರು? ನ್ಯೆಡಾ?'

ನಾನೆಂದೆ "ಹೂಂ"

ಮೃತ್ಯುಂಜಯನೆಂದ "ಕುಳಿತುಕೊ."

ಬಿಲಾಸಿಯು ಕತ್ತನ್ನು ಕೆಳಗೆ ಮಾಡಿಕೊಂಡು ನಿಂತಿದ್ದಳು. ಮೃತ್ಯುಂಜಯ ಒಂದೆರಡು ಮಾತುಗಳನ್ನು ಆಡಿದ. ಅದರ ಸಾರ ಇದಿದ್ದಿತು—ಸುಮಾರು ಒಂದೂವರೆ ತಿಂಗಳಿಂದ ಹಾಸುಗೆ ಹಿಡಿದಿರುವ, ನಡುವೆ ಹತ್ತು ಹದಿನೈದು ದಿನ ಎಚ್ಚರವಿರಲಿಲ್ಲ, ಒಂದೆರಡು ಮೂರು ದಿನಗಳಿಂದ ಮನುಷ್ಯರನ್ನು ಗುರುತಿಸತೊಡಗಿರುವ, ಇನ್ನೂ ಹಾಸಿಗೆ ಬಿಟ್ಟು ಏಳುವಂತೆ ಇರದಿದ್ದರೂ, ಇನ್ನು ಯಾವ ಅಂಜಿಕೆಯೂ ಇಲ್ಲ.

ಅಂಜಿಕೆಯ ಯಾವ ಮಾತೂ ಇರಲಿಲ್ಲ. ನಿಜ. ಆದರೆ ನಾನು ವಯಸ್ಸಿನಿಂದ ಚಿಕ್ಕವನಿದ್ದಾಗ್ಯೂ ಅರಣ್ಯದಲ್ಲಿದ್ದುಕೊಂಡು ಹಾಸುಗೆಯನ್ನು ಬಿಟ್ಟು ಏಳಲಿಕ್ಕಾಗದ ಆ ರೋಗಿಯನ್ನು ಬದುಕಿಸುವ

ಭಾರವನ್ನು ಆ ಹುಡುಗೆಯು ಹೊತ್ತುಕೊಂಡಿರುವಳು; ಅದೆಂತಹ ದೊಡ್ಡ ಭಾರ! ಎಂಬುದನ್ನು ನಾನು ಅರಿತೆ. ದಿನಗಳ ಮೇಲೆ ದಿನಗಳು ಬಂದುವು, ಬರುವುವು, ರಾತ್ರಿಯ ಮೇಲೆ ರಾತ್ರಿಗಳು ಬಂದುವು, ಬರುವುವು, ಆ ಹುಡುಗೆಯು ಸೇವೆ ಮಾಡುತ್ತಿರುವಳು. ಆಕೆಯ ಸೇವೆ ಎಷ್ಟು, ಎಷ್ಟು ಶುಶ್ರೂಷೆ. ಎಷ್ಟು ಧೈರ್ಯ, ಎಷ್ಟು ರಾತ್ರಿ ಜಾಗರಣೆ— ಲೆಕ್ಕವಿಲ್ಲ! ಇದು ಎಂತಹ ಸಾಹಸದ ಕೆಲಸ!

ಆದರೆ, ಯಾವ ವಸ್ತುವು ಈ ಅಸಾಧ್ಯ ಸಾಧನೆಯನ್ನು ಸಂಭವ ಮಾಡಿದ್ದಿತೊ ಅದರ ಪರಿಚಯು ಆಗ ನನಗೆ ಆಗಿರಲಿಲ್ಲ— ಆದರೆ ಅದರ ಪರಿಚಯು ಇನ್ನೊಂದು ದಿನ ನನಗೆ ಆಯಿತು.

ನಾನು ಹಿಂತಿರುಗುವಾಗ ಆ ಹುಡುಗೆಯು ತನ್ನ ಕೈಯಲ್ಲಿ ಒಂದು ದೀಪವನ್ನು ಹಿಡಿದುಕೊಂಡು ಆ ಬಿದ್ದ ಗೋಡೆಯ ತನಕ ನನ್ನ ಮುಂದೆ ಮುಂದೆ ಬಂದಳು. ಇದುವರೆಗೆ ಆಕೆಯು ಒಂದು ಮಾತನ್ನು ಕೂಡ ಆಡಿರಲಿಲ್ಲ. ಈಗ ಆಕೆಯು ಮೆಲ್ಲಗೆ ನುಡಿದಳು "ರಸ್ತೆಯ ವರೆಗೆ ನಿಮ್ಮನ್ನು ಕಳುಹಿ ಬರಲಾ?"

ದೊಡ್ಡ ದೊಡ್ಡ ಮಾವಿನ ಮರಗಳ ಆ ತೋಪು ಅತ್ಯಂತ ದಟ್ಟವಾಗಿ ಹಬ್ಬಿದ ಅಂಧಕಾರದ ತವರುಮನೆಯಾಗಿರುವಂತೆ ಕಾಣಿಸು ತ್ತಿದ್ದಿತು. ರಸ್ತೆಯು ಕಾಣಿಸುವ ಮಾತಂತೂ ದೂರವುಳಿಯಿತು. ನಮ್ಮ ಕೈಯೇ ನಮಗೆ ಕಾಣಿಸುತ್ತಿರಲಿಲ್ಲ. ನಾನೆಂದೆ "ಅಗತ್ಯವಿಲ್ಲ. ನನಗೆ ಕೇವಲ ದೀಪವನ್ನು ಮಾತ್ರ ಕೊಟ್ಟುಬಿಡಮ್ಮ."

ದೀಪವನ್ನು ನನ್ನ ಕೈಯಲ್ಲಿ ಕೊಟ್ಟೊಡನೆಯೆ ಆಕೆಯ ಉತ್ಕಂಠಿತ ಮುಖದ ಮೇಲೆ ನನ್ನ ದೃಷ್ಟಿಯು ಬಿದ್ದಿತು. ಮೆಲ್ಲಗೆ ಆಕೆಯೆಂದಳು "ಒಬ್ಬರಿಗೇ ಹೋಗಲು ಅಂಜಿಕೆಯಾಗುವುದಿಲ್ಲವೆ? ಇನ್ನೂ ಸ್ವಲ್ಪ ಮುಂದಕ್ಕೆ ಬಂದು ಕಳಿಸಲೇನು?"

ಒಬ್ಬ ಹೆಣ್ಣುಮಗಳು ಕೇಳುತ್ತಿರುವಳು— ಅಂಜಿಕೆಯಾಗುವು ದಿಲ್ಲವೇನು! ನನಗೆ ಆಗ ಏನೇ ಎನಿಸಿದ್ದರೂ ನಾನು 'ಇಲ್ಲ' ಎಂದು ಮುಂದೆ ಹೆಜ್ಜೆಯನ್ನಿಕ್ಕಿದೆ.

ನನ್ನ ಮೈಮೇಲೆ ಮುಳ್ಳು ಬಂದುವು. ಆಕೆಯು ನನಗೆ ದಾರಿ ತೋರಿಸಲಿಕ್ಕೆ ಇಷ್ಟೇಕೆ ಉತ್ಕಂಠಿತಳಾಗಿದ್ದಳೆಂಬುದು ಇಷ್ಟು ತಡಮಾಡಿ ಗೊತ್ತಾಯಿತು. ನಾನು ಬೇಡವೆಂದರೂ ಆಕೆಯು ಕೇಳದೆ ಇರುವ ಸಂಭವವಿದ್ದಿತು ಮತ್ತು ಆಕೆಯು ನನ್ನ ಸಂಗಡ ರಸ್ತೆಯ ವರೆಗೂ ಬಂದೇ ಬರುತ್ತಿದ್ದಳು. ಆದರೆ ಕಾಯಿಲೆಯಿಂದ ಮಲಗಿದ ಮೃತ್ಯುಂಜಯ ಒಬ್ಬನನ್ನೇ ಬಿಟ್ಟು ಬರಲು ಆಕೆಗೆ ಮನಸ್ಸಾಗಲಿಲ್ಲ.

ಇಪ್ಪತ್ತು ಇಪ್ಪತ್ತೈದು ಗುಂಟೆಗಳ ತೋಟವಿದ್ದಿತು, ಅದರೊಳಗಿನ ದಾರಿಯೂ ನೀಳವಾಗಿದ್ದಿತು. ಆ ಅಂಧಕಾರದಲ್ಲಿ ಅಂಜುತ್ತ ಅಂಜುತ್ತ ಹೆಜ್ಜೆಯನ್ನಿಕ್ಕಬೇಕಾಗುತ್ತಿದ್ದಿತು. ಮರುಕ್ಷಣದಲ್ಲಿ ಆ ಹುಡುಗೆಯ ಮಾತಿನಿಂದ ಮನವು ತುಂಬಿಹೋಗುತ್ತಿದ್ದಿತು, ಆದುದರಿಂದ ಅಂಜಿಕಗೆ ಅವಕಾಶವೇ ಇರುತ್ತಿರಲಿಲ್ಲ. ಆಗಾಗ್ಗೆ ನನ್ನ ಮನದಲ್ಲಿ ಬರತೊಡಗಿತು– 'ಯಾವನಾದರೂ ಓರ್ವ ನಾಯಲಾದ ರೋಗಿಯನ್ನು ಇಟ್ಟುಕೊಂಡು ಇಲ್ಲಿ ಇರುವುದು ಎಷ್ಟು ಕಠಿನವಾದ ಕಾರ್ಯವು! ಮೃತ್ಯುಂಜಯ ಯಾವ ಕ್ಷಣದಲ್ಲಿಯಾದರೂ ನಾಯಬಹುದಾಗಿದ್ದಿತು, ಆಗ ಈ ಅಡವಿ ಯಲ್ಲಿ ಇಡಿ ರಾತ್ರಿ ಈ ಒಂದೇ ಹುಡುಗೆ ಏನು ಮಾಡಬಲ್ಲಳು? ರಾತ್ರಿಯನ್ನು ಹೇಗೆ ಕಳೆಯುವಳು?' ಎಂಬ ವಿಚಾರ.

ಇದೇ ಮಾತಿನ ಎಳೆಯು ಕೂಡ ಬಹಳ ದಿನಗಳ ನಂತರದ ಒಂದು ವಿಷಯವು ನನ್ನ ನೆನಪಿಗೆ ಬರುವುದು. ಒಬ್ಬ ಆಸ್ತರು ನಾಯು ವಾಗ ನಾನು ಅಲ್ಲಿ ಇದ್ದ ಕತ್ತಲು ರಾತ್ರಿ, ಮನೆಯಲ್ಲಿ ಆಳುಮಕ್ಕಳು, ಮಕ್ಕಳು ಮರಿಗಳು ಯಾರೂ ಇರಲಿಲ್ಲ. ಕೇವಲ ಅವನ ಅದೇ ಆದ ವಿಧವೆ ಮತ್ತು ನಾನು ಮಾತ್ರ ಇದ್ದೆವು. ಅವನ ಹೆಂಡತಿ ಅತ್ಯಂತ ಶೋಕದಿಂದ ಹಣೆಹಣೆ ಗಟ್ಟಿಸಿಕೊಳ್ಳುತ್ತ ಚೀರಿ ಅಳತೊಡಗಿದಳು, ಹೀಗೆ ಅಳುತ್ತ ಆಕೆಯೂ ಎಲ್ಲಿ ಸತ್ತು ಹೋಗುವಳೊ ಎಂದು ಎನಿಸ ತೊಡಗಿತು. ಆಗಾಗ್ಗೆ ಆಕೆಯು ಅಳುತ್ತ ನನ್ನನ್ನು ಕೇಳತೊಡಗಿದಳು "ನಾನು ಸ್ವಸಂತೋಷದಿಂದ ಸಹಗಮನ ಮಾಡಲು ಸಿದ್ಧಳಿದ್ದರೆ ಸರಕಾರವು ಏಕೆ ಅಡ್ಡ ಬರಬೇಕು? ಇನ್ನು ನನಗೆ ತಿಲಮಾತ್ರವೂ

ಜೀವಿಸುವ ಇಚ್ಛೆ ಇಲ್ಲ. ಈ ಮಾತು ಸರಕಾರೀ ಜನರಿಗೆ ತಿಳಿಯುವು ದಿಲ್ಲೇನು? ಅವರ ಮನೆಯಲ್ಲಿ ಸ್ತ್ರೀಯರು ಇಲ್ಲವೇನು? ಅವರು ಕಲ್ಲಿನ ಮೂರ್ತಿಗಳೇನು? ಈ ರಾತ್ರಿಯಲ್ಲಿ ಐದಾರು ಜನ ಸೇರಿ ನದಿಯ ದಂಡೆಯ ಮೇಲೆ ಸಹಗಮನದ ಸಿದ್ಧತೆಯನ್ನು ಮಾಡಿಬಿಟ್ಟರೆ ಪುಲೀಸ ಠಾಣೇದವರಿಗೆ ಸುದ್ದಿ ಹೇಗೆ ಹತ್ತುವುದು?" ಇದೇ ರೀತಿಯಾಗಿ ಎಷ್ಟೋ ಮಾತುಗಳನ್ನು ಆಕೆಯು ಹೇಳತೊಡಗಿದಳು. ಆದರೆ, ನಾನು ಕುಳಿತುಕೊಂಡು ಆಕೆಯ ಅಳುವನ್ನು ಕೇಳುವುದು ಮಾತ್ರ ನನ್ನ ಕೆಲಸ ವಾಗಿರಲಿಲ್ಲ! ಬೀದಿಯೊಳಗೆ ಸುದ್ದಿ ಹೇಳಿ ಒರುವುದಾಗಿದ್ದಿತು. ಎಷ್ಟೋ ವಸ್ತುಗಳನ್ನು ಒಟ್ಟುಗೂಡಿಸಬೇಕಾಗಿದ್ದಿತು. ಆದರೆ ನಾನು ಹೊರಗೆ ಹೋಗಬೇಕಾಗಿದೆಯೆಂದು ಹೇಳಿದಕೂಡಲೆ ಸುಮ್ಮಗಾದಳು. ಕಣ್ಣು ಗಳನ್ನು ಒರೆಸಿಕೊಳ್ಳುತ್ತ "ಅಮ್ಮ, ಆಗಬೇಕಾದುದು ಆಗಿಹೋಯಿತು, ಈಗ ನೀನು ಹೊರಗೆ ಹೋಗಿ ಮಾಡುವುದಾದರೂ ಏನು? ರಾತ್ರಿಯು ಕಳೆಯಲಿ ಬಿಡು!" ಎಂದಳು.

ನಾನೆಂದೆ "ಬಹಳ ಕೆಲಸಗಳು ಇರುವುವು; ಹೋಗದಿದ್ದರೆ ನಡೆಯುವ ಹಾಗಿಲ್ಲ."

"ಇರಲಿ ಬಿಡು ಕೆಲಸ,— ನೀನು ಕುಳಿತುಕೊ."

"ಕೂತುಕೊಳ್ಳುವುದರಿಂದ ನಡೆಯದು, ಒಂದು ಬಾರಿ ಸುದ್ದಿ ಯನ್ನಾದರೂ ಹೇಳಬೇಕು." ಎಂದು ನಾನು ಮುಂದೆ ಅಡಿಯಿಟ್ಟಿ-ದ್ದೆನೊ ಇಲ್ಲವೊ ಆಕೆಯು ಒಮ್ಮೆಗೇ ಕೂಗಿದಳು "ಅಯ್ಯಯ್ಯೋ! ನಾನು ಒಬ್ಬಳೇ ಇರಲಾರೆ!"

ಮುಂಗಾಣದೆ ನಾನು ಕುಳಿತುಕೊಳ್ಳಬೇಕಾಯಿತು. ಆಗ ಇದಕ್ಕೆ ಕಾರಣವೇನಿರಬಹುದು ಎಂಬುದನ್ನು ಯೋಚಿಸಲಾಗಿ ಇದು ನನಗೆ ತಿಳಿದುಬಂದಿತು— ಪತಿಯು ಜೀವಿಸಿರುವಾಗ ಆಕೆಯು ಯಾವ ಅಂಜಿ-ಕೆಯೂ ಇಲ್ಲದೆ ಇಪ್ಪತ್ತೈದು ವರ್ಷಗಳ ತನಕ ಸಂಸಾರ ಸಾಗಿಸಿ ಕೊಂಡು ಬಂದಿರುವಳು. ಪತಿಯ ಮೃತ್ಯುವನ್ನು ಹೇಗಾದರೂ ಸಹಿಸಿ ಕೊಳ್ಳಬಹುದು, ಆದರೆ ಅವನ ಮೃತ ಶರೀರವನ್ನು ಈ ಅಂಧಕಾರ-

ಮಯವಾದ ರಾತ್ರಿಯಲ್ಲಿ ಐದು ನಿಮಿಷವನ್ನಾದರೂ ಇಟ್ಟುಕೊಂಡು ದುಃಖವನ್ನು ಸಹಿಸಲಿಕ್ಕಾಗುವುದಿಲ್ಲ. ಎದೆಯು ಯಾವುದಾದರೂ ಒಂದು ಘಟನೆಯಿಂದ ಬಿರಿಯುವುದು ಇದ್ದ ಪಕ್ಷದಲ್ಲಿ ಅದು ತನ್ನ ಮೃತ ಪತಿಯ ಬಳಿಯಲ್ಲಿ ಒಬ್ಬಳೇ ಕುಳಿತಿರುವುದರಿಂದ ಬಿರಿಯುವುದು!

ಆದರೆ, ಆಕೆಯ ದುಃಖವನ್ನು ತುಚ್ಛವಾಗಿ ಮಾಡಿ ತೋರಿಸುವ ಉದ್ದೇಶವಿಲ್ಲ ನನ್ನದು. ಆಕೆಯ ದುಃಖವು ನೈಜವಾದುದಲ್ಲವೆಂದು ನನ್ನ ಅಭಿಪ್ರಾಯ ಎಂದೂ ನಾನು ಹೇಳಬೇಕಾಗಿಲ್ಲ, ಒಬ್ಬಾಕೆಯ ವ್ಯವಹಾರದಿಂದಲೇ ನಾನು ಕೊನೆಯ ಮೀಮಾಂಸೆಯನ್ನೂ ಮಾಡಲಿಕ್ಕೆ ಬರುವಂತಿಲ್ಲ ಆದರೆ ನನಗೆ ಇಂತಹದೇ ಒಂದು ಸನ್ನಿವೇಶದ ನೆನಪು ಇದೆ. ಅದನ್ನು ನಾನು ಇಲ್ಲಿ ಉಲ್ಲೇಖಿಸದೇ ಇದನ್ನು ಹೇಳಬಯಸುವೆ– ಕೇವಲ ಕರ್ತವ್ಯ ಜ್ಞಾನದ ಬಲದಿಂದ ಅಥವಾ ಕೇವಲ ಬಹುಕಾಲದ ವರೆಗೆ ಸಂಸಾರ ಸಾಗಿಸಿಕೊಂಡು ಬಂದುದರ ಬಲದಿಂದ ಅಥವಾ ಅಧಿಕಾರದಿಂದ ಸ್ತ್ರೀಯು ಭಯವನ್ನು ಜಯಿಸಳು. ಅನೇಕ ಸ್ತ್ರೀ–ಪುರುಷರು ನೂರು ವರ್ಷಗಳ ತನಕ ಸಂಸಾರವನ್ನು ಸಾಗಿಸಿಕೊಂಡು ಬಂದಿದ್ದರೂ ಯಾವ ಶಕ್ತಿಯಿಂದ ಅವರು ಭಯವನ್ನು ಜಯಿಸಬಲ್ಲ ರೆಂಬುದನ್ನು ಹೇಳಲಾರರು. ಭಯರಹಿತವಾಗಿರುವ ಶಕ್ತಿಯು ಯಾವುದು, ಎಲ್ಲಿಂದ ಅದು ಬರುವುದು ಎಂಬುದನ್ನು ಹೇಳಲಿಕ್ಕಾಗುವುದಿಲ್ಲ

ಆದರೆ ಒಂದು ದಿನ ಅಕಸ್ಮಾತ್ತಾಗಿ ನರನಾರಿಯರಿಗೆ ಆ ಶಕ್ತಿಯ ಪರಿಚಯವಾದಾಗ ಸಮಾಜದ ನ್ಯಾಯಾಲಯದ ಎದುರಿಗೆ ಅದನ್ನು ಅಪರಾಧಿಯನ್ನಾಗಿ ಮಾಡಿ ಅದಕ್ಕೆ ದಂಡವನ್ನು ವಿಧಿಸಬಹುದು, ಆದರೆ, ಮನುಷ್ಯನ ಯಾವ ವಸ್ತುವು ಸಾಮಾಜಿಕ ಇರುವುದಿಲ್ಲವೊ ಅದು ಸ್ವತಃ ಮಾನವನ ದುಃಖದಿಂದ ದುಃಖಿತವಾಗಿ ತನ್ನ ಕಣ್ಣೀರನ್ನು ಹರಿಸದೆ ಇರಲಾರದು.

ಸುಮಾರು ಎರಡು ತಿಂಗಳಿಂದ ನಾನು ಮೃತ್ಯುಂಜಯನ ಬಗ್ಗೆ ಯಾವ ವಿಚಾರವನ್ನೂ ಮಾಡಲಿಲ್ಲ. ಅವನ ಬಗ್ಗೆ ಯಾವ ಮಾತನ್ನೂ ತಿಳಿದುಕೊಳ್ಳಲು ಯತ್ನಿಸಲಿಲ್ಲ. ಯಾರು ಹಳ್ಳಿಗಳನ್ನು ನೋಡಿಲ್ಲವೊ

ಮತ್ತು ಕೇವಲ ರೈಲು ಡಬ್ಬಿಗಳಲ್ಲಿ ಕುಳಿತು ಕಿಡಿಕಿಯ ಹೊರಗೆ ತಲೆಹಾಕಿ ಹಳ್ಳಿಗಳನ್ನು ನೋಡಿರುವರೊ ಅವರು ಬಹುಶಃ ಆಶ್ಚರ್ಯ ದಿಂದ ಹೇಳಬಹುದು "ಇದೆಂತಹ ಮಾತು? ಸ್ವತಃ ತನ್ನ ಕಣ್ಣಿಂದ ಈ ದುಸ್ಥಿತಿಯನ್ನು ಕಂಡು ಬಂದ ಬಳಿಕ ಕೂಡ ಎರಡು ಮೂರು ತಿಂಗಳ ವರೆಗೆ ಅವನ ಬಗ್ಗೆ ಏನನ್ನೂ ತಿಳಿದುಕೊಳ್ಳಲೆತ್ನಿಸಿದೆ ಇರುವುದು ಸಾಧ್ಯವೇ?'' ಅವರ ಜ್ಞಾನಕ್ಕಾಗಿ ಇಷ್ಟೇ ಹೇಳಬಹುದು "ಇದು ಸಾಧ್ಯವಷ್ಟೇ ಇಲ್ಲ. ಹೀಗೆಯೆ ಆಗುತ್ತಿರುವುದು. ಯಾರ ಮೇಲಾದರೂ ಸಂಕಟ ಬಂದಾಗ ಓಣಿಯ ಜನರೆಲ್ಲ ಒಟ್ಟುಗೂಡಿ ತಿರುಗಿ ಬೀಳುವರು ಎಂಬ ವದಂತಿಯು ಇದೆ. ಇಂತಹ ಸ್ಥಿತಿಯು ಸತ್ಯ ಯುಗದಲ್ಲಾದರೂ ಇದ್ದಿತೊ ಇಲ್ಲವೊ ಎಂಬುದು ಗೊತ್ತಿಲ್ಲ. ಆದರೆ ಇಂದಿನ ಯುಗದಲ್ಲಿ ಇಂತಹ ಸ್ಥಿತಿಯನ್ನು ನೋಡಿರುವೆನು ಎಂಬುದು ನೆನಪಿಲ್ಲ. ಆದರೆ, ಇಷ್ಟು ಮಾತ್ರ ನಿಜ, ಅವನು ಸತ್ತ ಸುದ್ದಿಯು ಇದುವರೆಗೆ ತಿಳಿದಿಲ್ಲವೆಂದ ಬಳಿಕ ಅವನು ಅವಶ್ಯವಾಗಿ ಜೀವಂತ ಇರಬೇಕು, ಇದರಲ್ಲಿ ಸಂದೇಹ ವೇನೂ ಇಲ್ಲ.''

ಈ ದಿನಗಳಲ್ಲಿ ಒಂದು ದಿನ ಒಂದು ದನಿಯು ಕೇಳಿಬಂದಿತು. ಮೃತ್ಯುಂಜಯನ ಆ ಕಕ್ಕ ಕೂಗುತ್ತ ತಿರುಗಾಡುತ್ತಿದ್ದ ''ಹೋಯಿತು, ಹೋಯಿತು, ಊರು ರಸಾತಳಕ್ಕೆ ಹೋಯಿತು! ಸಮಾಜದಲ್ಲಿ ಈಗ ನಾಲ್ತೆ*ಯ ಮಿತ್ತಿರ ಎಂದು ಹೇಳಿಸಿಕೊಂಡು ಸನ್ಮಾನದಿಂದ ಬಾಳುವ ಭಾಗ್ಯ ನನಗೆ ಉಳಿಯಲಿಲ್ಲ! ಅಯೋಗ್ಯ ಹುಡುಗ ಒಬ್ಬ ಹಾವಾಡಿಗನ ಮಗಳನ್ನು ತನ್ನ ಮನೆಗೆ ಕರೆದುಕೊಂಡು ಬಂದಿರುವ! ಕೇವಲ ಶೋಭನವನ್ನಷ್ಟೇ ಮಾಡಿಕೊಂಡಿಲ್ಲ, ಮನೆಯಲ್ಲಿ ಆಕೆಯಿಂದ ಅಡುಗೆ ಮಾಡಿಸಿ ಉಣ್ಣುತ್ತಿರುವ! ಊರಲ್ಲಿ ಇದಕ್ಕೆ ಶಾಸನವಾಗದಿದ್ದರೆ ಎಲ್ಲರೂ ಅಡವಿಗೆ ಹೋಗಿ ಇರುವುದಿಲ್ಲ! ಕೊಡೋಲಾ ಮತ್ತು ಹರಿಪುರದ ಸಮಾಜವು ಇದನ್ನು ಕೇಳಿದರೆ—'' ಇತ್ಯಾದಿ ಇತ್ಯಾದಿ. ಸರಿ, ಇನ್ನು ಕೇಳುವುದೇನು? ಹುಡುಗರು, ಮುದುಕರು, ಹುಡುಗೆಯರು, ಮುದುಕೆ-

* ಒಂದು ಸ್ಥಾನದ ಸನ್ಮಾನ್ಯ ವಂಶ; ಇದರ ಬಗ್ಗೆ ಅವನಿಗೆ ಗರ್ವ ಇದ್ದಿತು.

ಯರು, ಎಲ್ಲರ ಬಾಯಲ್ಲಿ ಇದೇ ಮಾತು! ‘ಆಂ, ಇದೇನಾಯಿತು? ಕಲಿಕಾಲವು ನಿಜವಾಗಿಯೂ ಮೇಲೇಳಬೇಕೆನ್ನುತ್ತಿರುವುದು!’

ಕಕ್ಕ ಇದನ್ನೂ ಹೇಳುತ್ತ ತಿರುಗಾಡುತ್ತಿರುವ “ಹೀಗೆ ಆಗುವುದೆಂದು ನಾನು ಮೊದಲೇ ಅರಿತಿದ್ದೆ. ಕೇವಲ ತಮಾಷೆಯನ್ನು ನೋಡುತ್ತಿದ್ದೆ— ಎಲ್ಲಿಯ ನೀರು ಎಲ್ಲಿಗೆ ಹೋಗಿ ಸಾಯುವುದು ಎಂದು! ಇಲ್ಲದಿದ್ದರೆ— ಯಾವ ಪರಕೀಯನೂ ಅಲ್ಲ, ನೆರೆಹೊರಯವನೂ ಅಲ್ಲ, ನನ್ನ ಸ್ವಂತ ಅಣ್ಣನ ಮಗ ಅವ. ನಾನು ಅವನನ್ನು ಮನೆಗೆ ಕರೆದು-ಕೊಂಡು ಹೋಗುತ್ತಿದ್ದಿಲ್ಲವೇನು? ಡಾಕ್ಟರರು ವೈದ್ಯರು ಮೊದಲಾದವರಿಂದ ಅವನ ಚಿಕಿತ್ಸೆ ಮಾಡಿಸುವಷ್ಟು ಶಕ್ತಿ ನನ್ನಲ್ಲಿ ಇರಲಿಲ್ಲವೇನು? ಇದನ್ನು ನಾನೇಕೆ ಮಾಡಲಿಲ್ಲ? ಇದನ್ನು ಈಗ ಎಲ್ಲರೂ ನೋಡಲಿ. ಆದರೆ ಇನ್ನು ಸುಮ್ಮಗಿರಲಿಕ್ಕಾಗುವುದಿಲ್ಲ! ಇದರಿಂದ ಮಿತ್ತಿರ ವಂಶದ ಹೆಸರೇ ಮುಳುಗಿ ಹೋಗುವುದು! ಊರಿನ ಮುಖಕ್ಕೆ ಮಸಿ ಹತ್ತುವುದು!

ಆಗ ನಾವು ಊರಿನವರೆಲ್ಲರೂ ಕೂಡಿಕೊಂಡು ಮಾಡಿದ ಕೆಲಸವು ನೆನಪಿಗೆ ಬರುತ್ತಲೇ ನಾನು ಇವೊತ್ತಿಗೂ ನಾಚಿಕೆಯಿಂದ ಮಿಡಿಯುತ್ತಿರುವೆ. ಕಕ್ಕ ನಾಲ್ತೆಯ ಮಿತ್ತಿರ ವಂಶದ ಅಭಿಮಾನವನ್ನು ತುಂಬಿಕೊಂಡು ನಡೆದರು. ನಾವು ಹತ್ತು ಹನ್ನೆರಡು ಜನರು ಅವರ ಜೊತೆಗೆ ನಡೆದೆವು— ಊರಿನ ಮುಖಕ್ಕೆ ಮಸಿ ಹತ್ತಬಾರದೆಂದು.

ಮೃತ್ಯುಂಜಯನ ಬಿದ್ದ ಮನೆಗೆ ಹೋದಾಗ ಸಂಜೆಯಾಗಿದ್ದಿತು. ಬಿಲಾಸಿಯು ಬಿದ್ದ ಮನೆಯ ಹೊರಭಾಗದಲ್ಲಿ ಒಂದು ಕಡೆಗೆ ಕುಳಿತು ರೊಟ್ಟಿಯನ್ನು ಮಾಡುತ್ತಿದ್ದಳು. ಅಕಸ್ಮಾತ್ ಇಷ್ಟು ಜನರು ಲಾಠಿಗಳನ್ನು ಹಿಡಿದುಕೊಂಡು ಬಂದುದನ್ನು ಆಕೆಯು ನೋಡಿ ಅಂಜಿದಳು, ಆಕೆಯ ಮೋರೆಯು ಕಳೆಗುಂದಿತು.

ಕಕ್ಕನು ಕೋಣೆಯೊಳಗೆ ಹೋಗಿ ನೋಡಿದ. ಮೃತ್ಯುಂಜಯ ಮಲಗಿದ್ದ. ಸರಿ, ಕೂಡಲೆ ಆ ಕೋಣೆಯ ಬಾಗಿಲನ್ನು ಮುಚ್ಚಿ ಚಿಲಕ ಹಾಕಿದ ಮತ್ತು ಅರ್ಧ ಸತ್ತ ಆ ಹುಡುಗೆಯೊಡನೆ ಮಾತನಾಡಲು

ಪ್ರಾರಂಭಿಸಿದ. ಈ ಜಗತ್ತಿನಲ್ಲಿ ಯಾವ ಕಾಲದಲ್ಲಾದರೂ ಈ ಕಕ್ಕನು ತನ್ನ ಅಣ್ಣನ ಮಗನ ಹೆಂಡತಿಯ ಕೂಡ ಆಡಿದ ಮಾತುಗಳಂತಹ ಮಾತುಗಳನ್ನು ಯಾವ ಕಕ್ಕನೂ ಆಡಿರಲಿಕ್ಕಿಲ್ಲ. ಆ ಹುಡುಗೆಯು ಹಾವುಗಾರಾಕಯಾದರೂ ಅವಳಿಗೆ ಕೂಡ ಈ ಕಕ್ಕನ ಮಾತುಗಳನ್ನು ಸಹನ ಮಾಡಿಕೊಳ್ಳಲು ಆಗಲಿಲ್ಲ. ಕಣ್ಣುಗಳನ್ನು ಮೇಲಕ್ಕೆತ್ತಿ ಎಂದಳು "ನನ್ನ ತಂದೆಯು ಇವರ ಕೂಡ ಶೋಭನ ಮಾಡಿರುವರು ಎಂಬುದು ನಿಮಗೆ ಗೊತ್ತಿದೆಯೊ!"

"ಒಳ್ಳೇದು, ನಿಲ್ಲು! ಇತ್ಯಾದಿ ಇತ್ಯಾದಿ" ಎಂದು ಕಕ್ಕನು ನುಡಿದನು. ಕೂಡಲೆ ಹತ್ತು ಹದಿನೈದು ಜನರು ಹುಂಕಾರ ಮಾಡುತ್ತ ಆ ಹುಡುಗೆಯ ಮೈಮೇಲೆ ಏರಿಹೋದರು. ಒಬ್ಬನು ಹೆಳಲನ್ನು ಹಿಡಿದನು, ಒಬ್ಬನು ಕಿವಿಗಳನ್ನು ಹಿಡಿದನು, ಒಬ್ಬನು ಕೈಯನ್ನು ಹಿಡಿದನು. ಹೀಗೆ ಆ ಹುಡುಗೆಯ ಯಾವುದಾದರೊಂದು ಶರೀರದ ಭಾಗವನ್ನು ಹಿಡಿಯುವ ಸುಯೋಗವು ಯಾರಿಗೆ ದೊರೆಯಲಿಲ್ಲವೊ ಅವರೂ ಸುಮ್ಮಗೆ ಇರಲಿಲ್ಲ. ಏಕೆಂದರೆ—

ನಾವು ಸಂಗ್ರಾಮಕ್ಷೇತ್ರದಲ್ಲಿ ಹೇಡಿಗಳಂತೆ ಸುಮ್ಮಗೆ ನಿಂತು-ಕೊಂಡಿರಬಲ್ಲೆವು—ನಮ್ಮ ಬಗ್ಗೆ ಇಂತಹ ಹೀನ ನುಡಿಗಳನ್ನು ಆಡುತ್ತ ತಿರುಗುವುದರಿಂದ ನಾರಾಯಣನ ಕರ್ತೃಪಕ್ಷಕ್ಕೂ ಕೂಡ ನಾಚಿಕೆ ಎನಿಸಿರಬಹುದು! ಇಲ್ಲಿ ಒಂದು ಅಪ್ರಾಸಂಗಿಕ ಮಾತನ್ನು ಹೇಳ ಬೇಕನ್ನುವೆ. ವಿಲಾಯತಿಯಂಥ ಮ್ಲೇಂಛ ದೇಶಗಳಲ್ಲಿ ಸಹ ಸ್ತ್ರೀಯರು ನಿರ್ಬಲರೂ ನಿಸ್ಸಹಾಯರೂ ಆಗಿರುವುದರಿಂದ ಅವರ ಮೇಲೆ ಕೈಯೆತ್ತಬಾರದೆಂಬ ಕಟ್ಟ ಸಂಸ್ಕಾರವು ಜನರ ಮನಸ್ಸಿನಲ್ಲಿರುವುದು ಎಂಬುದನ್ನು ಕೇಳಿರುವೆ. ಇದೆಂತಹ ಮಾತು? ಸನಾತನ ಹಿಂದೂಗಳು ಈ ಕಟ್ಟ ಸಂಸ್ಕಾರವನ್ನು ಮಾನ್ಯಮಾಡುವುದಿಲ್ಲ. ಯಾರ ಶರೀರದಲ್ಲಿ ಬಲವಿಲ್ಲವೊ ಅವರ ಮೇಲೆಯೆ ಕೈಯೆತ್ತಬಹುದು ಎಂದು ನಾವೆನ್ನು-ತ್ತೇವೆ. ಅವರು ನಾರಿಯರೇ ಇರಲಿ, ನರರೇ ಇರಲಿ, ಅವರ ಮೇಲೆ ಕೈಮಾಡಬಹುದು.

ಹುಡುಗೆಯು ಮೊದಲೇ ಹೃದಯವು ಕರಗುವಂತೆ ಕೂಗಿದ್ದಳು. ಬಳಿಕ ಒಮ್ಮೆಲೇ ಸುಮ್ಮನಾದಳು. ಆದರೆ, ನಾವು ಆಕೆಯನ್ನು ಎಳೆಯುತ್ತ ಊರ ಹೊರಗೆ ಬಿಟ್ಟು ಬರಲಿಕ್ಕೆ ಹೋದಾಗ ಬಿಕ್ಕಿಬಿಕ್ಕಿ ಎನ್ನತೊಡಗಿದಳು "ನನಗೆ ಸ್ವಲ್ಪ ಬಿಡಿರಿ, ರೊಟ್ಟಿಯನ್ನು ಮನೆಯೊಳಗೆ ಇಟ್ಟು ಬರುವೆ. ಹೊರಗೇ ಇದ್ದರೆ ನಾಯಿ ನರಿಗಳು ಬಂದು ತಿನ್ನುವುವು. ಅವರು ಅಶಕ್ತರು, ಇಡಿ ರಾತ್ರಿಯೆಲ್ಲ ಉಪವಾಸ ಇರಬೇಕಾದೀತು."

ಮೃತ್ಯುಂಜಯ ಮುಚ್ಚಿದ ಕೋಣೆಯಲ್ಲಿ ಹುಚ್ಚರಂತೆ ಕೂದಲನ್ನು ಕೆದರಿಕೊಂಡು ಬಾಗಿಲನ್ನು ಒದೆಯತೊಡಗಿದ. ಶ್ರಾವ್ಯ ಮತ್ತು ಅಶ್ರಾವ್ಯ ಭಾಷೆಯಲ್ಲಿ ಕೂಗತೊಡಗಿದ. ಆದರೆ ನಾವು ಅದರಿಂದ ತಿಲಮಾತ್ರವೂ ಬೆದರಲಿಲ್ಲ. ನಮ್ಮ ನಾಡಿನ ಕಲ್ಯಾಣಕ್ಕಾಗಿ ಎಲ್ಲ ನುಡಿಗಳನ್ನು ಸಹಿಸುತ್ತ ಅವನನ್ನೂ ಎಳೆಯುತ್ತ ಊರ ಹೊರಗೆ ಹೋದೆವು.

'ಹೋದೆವು' ಎಂದು ನಾನು ಹೇಳುತ್ತಿರುವೆ, ಏಕೆಂದರೆ ನಾನೂ ಅವರ ಕೂಡ ಇದ್ದೆ. ಅದೇಕೋ ಏನೊ ನನ್ನಲ್ಲಿ ಸ್ವಲ್ಪ ನಿರ್ಬಲತೆಯು ಅಡಗಿಕೊಂಡಿದ್ದಿತು. ಅದರಿಂದ ನಾನು ನನ್ನ ಕೈಯನ್ನು ಅವನ ಮೇಲೆ ಎತ್ತಲಿಲ್ಲ. ಆದರೆ ನಾನು ಒಳಗಿಂದೊಳಗೇ ಅಳತೊಡಗಿದೆ. ಅವನು ಅನ್ಯಾಯ ಮಾಡಿರುವ; ಆದ್ದರಿಂದ ಆವನನ್ನು ಊರಹೊರಗೆ ಹಾಕುವುದೇ ಒಳಿತು ಎಂದು ತೋರುವುದು; ಆದರೆ, ನಾವು ಒಳ್ಳೆಯ ಕಾರ್ಯವನ್ನು ಮಾಡುತ್ತಿರುವೆವೆಂದು ನನಗೆನಿಸಲಿಲ್ಲ. ಆದರೆ ಇದು ನನ್ನ ಬಗ್ಗೆ ಹೇಳುವ ಮಾತು. ಇದು ಇಷ್ಟಕ್ಕೇ ಇರಲಿ ಬಿಡಿರಿ.

ಊರಲ್ಲಿ ಉದಾರತೆಯು ಎಳ್ಳಷ್ಟೂ ಇಲ್ಲವೆಂದು ನೀವು ತಿಳಿದುಕೊಳ್ಳಬೇಡಿರಿ. ಉದಾರತೆಯ ಅಭಾವವು ಎಳ್ಳಷ್ಟೂ ಇಲ್ಲ. ನಾವು ದೊಡ್ಡವರಾದ ಮೇಲೆ ಎಂತೆಂತಹ ದೊಡ್ಡ ಉದಾರತೆಯ ಕೆಲಸಗಳನ್ನು ಮಾಡುವುವೆಂಬುದನ್ನು ನೀವು ಬಲ್ಲಿರಾ? ಆಗ ನೀವು ನಮ್ಮ ಉದಾರತೆಯ ಕಾರ್ಯಗಳನ್ನು ಕುರಿತು ಕೇಳಿ ಆಶ್ಚರ್ಯ ಪಡುವಿರಿ!

ಒಂದು ವೇಳೆ ಆ ಹುಡುಗೆಯ ಕೈಯಿಂದ ಅಡುಗೆ ಮಾಡಿಸಿ ಊಟ ಮಾಡುವ ಅಕ್ಷಮ್ಯ ಅಪರಾಧವನ್ನು ಮಾಡದೆ ಇದ್ದಿದ್ದರೆ ನಾವು

ಈ ರೀತಿಯಾಗಿ ಸಿಟ್ಟಿಗೇಳುತ್ತಿರಲಿಲ್ಲ. ಕಾಯಸ್ಥರ ಹುಡುಗನ ಕೂಡ ಹಾವಾಡಿಗರ ಹುಡುಗಿಯ ಶೋಭನ? ಇದು ನಗೆಯಲ್ಲಿಯೆ ಹಾರಿಸಿ ಬಿಡುವಂತಹ ವಿಷಯ. ಆದರೆ ಅನ್ನವನ್ನು ಉಂಡು ಅವನು ಮಹಾ ಕಾಲವನ್ನೇ ತನ್ನ ಕಡೆಗೆ ಬರಮಾಡಿಕೊಂಡ. ಅವನು ಎರಡೂವರೆ ತಿಂಗಳಿಂದ ಕಾಯಿಲೆ ಬಿದ್ದಿರುವ, ಬಿದ್ದಿರಲಿ; ರೋಗಶಯ್ಯೆಯ ಮೇಲೆ ಮಲಗಿರುವ, ಮಲಗಿರಲಿ; ಇದಕ್ಕಾಗಿ ಅವನು ಈ ಹುಡುಗಿಯ ಕೈಯಿಂದ ಮಾಡಿದ ಅನ್ನವನ್ನು ಉಣ್ಣಬೇಕೆ? ಪುರಿಯಲ್ಲ, ಸಂದೇಶ* ವಲ್ಲ, ಕುರಿಯ ಮಾಂಸವಲ್ಲ! ಅನ್ನ ಉಣ್ಣುವುದು ಅನ್ನ, ಮಹಾಪಾಪ! ಅವನನ್ನು ನಿಶ್ಚಯವಾಗಿಯೂ ಕ್ಷಮಿಸಲಾಗದು! ಆದುದರಿಂದ ಹಳ್ಳಿಯ ಜನರು ಸಂಕುಚಿತ ಬುದ್ಧಿಯವರು ಇಲ್ಲ. ನಾಲ್ಕು ಹರದಾರಿ ನಡೆದು ಯಾರು ವಿದ್ಯೆಯನ್ನು ಗಳಿಸಿರುವರೋ ಅವರೇ ಒಂದು ದಿನ ದೊಡ್ಡವ ರಾಗಿ ಸಮಾಜದ ಶಿರೋಮಣಿಗಳಾಗುವರು! ದೇವಿ ವೀಣಾಪಾಣಿಯ ವರದಿಂದ ಸಂಕುಚಿತ ಬುದ್ಧಿಯು ಅವರಲ್ಲಿ ಬಂದೀತಾದರೂ ಹೇಗೆ?

ಇದನ್ನೇ ನೋಡಿರಲ್ಲ, ಇದಾದಬಳಿಕ ಸ್ವಲ್ಪೇ ದಿನಗಳಲ್ಲಿ ಪ್ರಾತಃ ಸ್ಮರಣೀಯ ಸ್ವರ್ಗೀಯ ಮುಖ್ಯೋಪಾಧ್ಯಾಯರ ವಿಧವೆಯಾದ ಸೊಸೆಯು ಮಾನಸಿಕ ವೈರಾಗ್ಯದಿಂದ ಎರಡು ವರ್ಷಗಳ ತನಕ ಕಾಶಿವಾಸವನ್ನು ಮಾಡಿ ಊರಿಗೆ ಬಂದಬಳಿಕ ನಿಂದಕ ಜನರು ಪಿಸು ಮಾತುಗಳನ್ನಾಡತೊಡಗಿದರು— ಅರ್ಧ ಆಸ್ತಿಯು ಆ ವಿಧವೆಯದು, ಅದು ತಮ್ಮ ಕೈಯಿಂದ ಎಲ್ಲಿ ಹೊರಟು ಹೋಗುವುದೊ ಎಂದು ಚಿಕ್ಕ ಮುಖ್ಯೋಪಾಧ್ಯಾಯರು ಬಹಳ ಪ್ರಯತ್ನಪಟ್ಟು ಬಹಳ ಪರಿಶ್ರಮದಿಂದ ಸೊಸೆಯನ್ನು ಎಲ್ಲಿಂದ ಕರೆದುಕೊಂಡು ಬಂದರೊ ಆ ಸ್ಥಳವು ಅವಶ್ಯ ವಾಗಿ ಕಾಶಿ ಪಟ್ಟಣವೇ ಇರಬೇಕು! ಏನೇ ಇರಲಿ, ಚಿಕ್ಕ ಬಾಬುಗಳು ತಮ್ಮ ಸ್ವಾಭಾವಿಕ ಉದಾರತೆಯಿಂದ ಗ್ರಾಮದ ಪಂಚಾಯತಿ ಪೂಜೆಗೆ ಇನ್ನೂರು ರೂಪಾಯಿ ದಾನಕೊಟ್ಟು ಐದು ಗ್ರಾಮದ ಬ್ರಾಹ್ಮಣರಿಗೆ ಉತ್ತಮ ಫಲಾಹಾರವನ್ನು ಮಾಡಿಸಿ ದಕ್ಷಿಣೆಯನ್ನು ಕೊಟ್ಟು,

*ಬಂಗಾಲಿ ಜನರ ಅತ್ಯಂತ ಪ್ರೀತಿಯ ಒಂದು ತರದ ಮಿಠಾಯಿ.

ಪ್ರತಿಯೊಬ್ಬ ಸದ್ ಬ್ರಾಹ್ಮಣನ ಕೈಯಲ್ಲಿ ಕಂಚಿನ ಒಂದೊಂದು ಥಾಲಿಯನ್ನು ಕೊಟ್ಟು ಬೀಳ್ಕೊಂಡ ಬಳಿಕ ನಾಲ್ಕೂ ಕಡೆಗೆ ಅವರ ಬಗ್ಗೆ ಧನ್ಯ ಧನ್ಯೋದ್ಗಾರಗಳಿಂದ ಗಗನವು ನಿನಾದಿಸಿತು. ತಮ್ಮ ತಮ್ಮ ಮನೆಗೆ ಬರುವಾಗ ಅನೇಕ ಜನರು 'ದೇಶಕ್ಕಾಗಿ ಮತ್ತು ದೇಶದ ಹಿತಕ್ಕಾಗಿ ಇಂತಹ ದೊಡ್ಡ ಮನುಷ್ಯರ ಮನೆಮನೆಯಲ್ಲಿ ಪ್ರತಿ ತಿಂಗಳೂ ಅದೇಕೆ ಸದನುಷ್ಠಾನಗಳು ಆಗಬಾರದು?' ಎಂದು ಎನ್ನುತ್ತಿದ್ದರು. ಹೀಗೆಯೆ ಪ್ರತಿತಿಂಗಳೂ ನಡೆಯಬೇಕೆಂದು ಬಯಸತೊಡಗಿದರು.

ಆದರೆ, ಹೋಗಲಿ ಬಿಡಿರಿ. ಇಂಥ ಮಹತ್ವದ ಕತೆಗಳು ಎಷ್ಟೋ ಇವೆ. ಯುಗ-ಯುಗಗಳಿಂದ ಸಂಚಿತವಾಗಿ ಅವುಗಳ ಸ್ತೂಪವೇ ಪ್ರತಿಯೊಬ್ಬ ಹಳ್ಳಿಯ ನಿವಾಸಿಯ ಮನೆಯ ಮುಂದೆ ನಿಂತಿದೆ. ಇದೇ ದಕ್ಷಿಣ ಬಂಗಾಲದ ಬಹಳ ಹಳ್ಳಿಗಳಲ್ಲಿ ನಾನು ಅಲೆದಾಡಿರುವೆ. ಗೌರವವನ್ನು ಹೆಚ್ಚಿಸುವ ದೊಡ್ಡ ದೊಡ್ಡ ಸಂಗತಿಗಳನ್ನು ನಾನು ಪ್ರತ್ಯಕ್ಷ ಕಂಡಿರುವೆ. ಜನ ಇತಿಹಾಸದಲ್ಲಿ, ಧರ್ಮದಲ್ಲಿ. ಸಮಾಜದಲ್ಲಿ, ವಿದ್ಯೆಯಲ್ಲಿ ಮುಂದುವರೆದಿರುವರು; ಶಿಕ್ಷಣವನ್ನು ಪೂರ್ಣ ಪಡೆದಿರುವರು; ಇನ್ನು ಕೇವಲ ಇಂಗ್ಲೀಷರಿಗೆ ಮನಬಂದಂತೆ ಬೈಯಲು ಸಮರ್ಥರಾದರೆ ತೀರಿತು ದೇಶದ ಉದ್ಧಾರ ಮಾಡಿದಂತಾಯಿತು!

ಸುಮಾರು ಒಂದು ವರ್ಷವು ಕಳೆದುಹೋಗಿರುವುದು. ಸೊಳ್ಳೆಗಳ ಕಡಿತದ ಕಾಟವನ್ನು ಸಹಿಸುವುದಾಗದೆ ಹೋದ ಬಳಿಕ ಸನ್ಯಾಸಿ ಜೀವನಕ್ಕೆ ರಾಜೀನಾಮೆಯನ್ನು ಕೊಟ್ಟು ನಾನು ಮನೆಗೆ ಹಿಂತಿರುಗಿ ಬಂದಿರುವೆ. ಒಂದು ದಿನ ಮಧ್ಯಾಹ್ನದಲ್ಲಿ ನಮ್ಮ ಊರಿಂದ ಎರಡು ಹರದಾರಿ ದೂರದಲ್ಲಿದ್ದ ಮಾಲಪಾಡೆಯೊಳಗಿಂದ ಹೋಗುತ್ತಿದ್ದೆ, ಅಕಸ್ಮಾತ್ ಒಂದು ಗುಡಿಸಲದ ಬಾಗಿಲ ಬಳಿಯಲ್ಲಿ ಮೃತ್ಯುಂಜಯನು ಕುಳಿತುದನ್ನು ನೋಡಿದೆ. ಅವನ ತಲೆಯ ಮೇಲೆ ಕಾವಿ ಬಟ್ಟೆಯ ರುಮಾಲವಿದ್ದಿತು, ಕೂದಲುಗಳು ಉದ್ದುದ್ದಾಗಿ ಬೆಳೆದಿದ್ದುವು, ಮೀಸೆಗಳೂ ಬೆಳೆದಿದ್ದುವು, ಕೊರಳಲ್ಲಿ ರುದ್ರಾಕ್ಷ ಮಾಲೆ ಮತ್ತು ಕಾಚಿನ ಮಾಲೆಗಳೂ ಇದ್ದುವು. ಅವನನ್ನು ನೋಡಿ ಇವನೇ ಆ ಮೃತ್ಯುಂಜಯ

ಎಂದು ಯಾರು ಹೇಳುವರು? ಕಾಯಸ್ಥರ ಹುಡುಗ ಒಂದೇ ವರ್ಷದಲ್ಲಿ ತನ್ನ ಜಾತಿಯನ್ನು ಬಿಟ್ಟು ತೀರ ಹಾವಾಡಿಗನಾಗಿ ಬಿಟ್ಟಿರುವ. ಮನುಷ್ಯನು ತನ್ನ ಹದಿನಾಲ್ಕು ಪೀಳಿಗೆಗಳಿಂದ ಬಂದಿರುವ ಜಾತಿಗೆ ಎಷ್ಟು ಬೇಗ ಎಳ್ಳು-ನೀರನ್ನು ಬಿಟ್ಟು ಬೇರೆ ಜಾತಿಯವನಾಗುವನೆಂಬ ವಿಷಯವು ಅತ್ಯಂತ ಅಚ್ಚರಿಯ ಮಾತಾಗಿರುವುದು. ಬ್ರಾಹ್ಮಣರ ಹುಡುಗನು ಭಂಗಿಯ ಹುಡುಗಿಯ ಕೂಡ ಮದುವೆ ಮಾಡಿಕೊಂಡು ಭಂಗೀ ಆದನು ಮತ್ತು ಭಂಗೀ ಕೆಲಸವನ್ನು ಮಾಡತೊಡಗಿದನು ಎಂಬ ಸಂಗತಿಯನ್ನು ಬಹುಶಃ ನಿಮ್ಮಲ್ಲಿ ಎಲ್ಲರೂ ಕೇಳಿರಬಹುದು. ಒಳ್ಳೇ ಬ್ರಾಹ್ಮಣರ ಹುಡುಗನೊಬ್ಬನು ಮ್ಯಾಟ್ರಿಕ್ ಪಾಸಾದ ಬಳಿಕ ಕೂಡ ಕೊರವರ ಹುಡುಗಿಯೊಡನೆ ಮದುವೆ ಮಾಡಿಕೊಂಡುದನ್ನು ನಾನು ನೋಡಿರುವೆ. ಈಗ ಅವನು ಕಸಬರಿಗೆ, ಮರಗಳನ್ನು ಮಾಡಿ ಮಾರುವ, ಹಂದಿಗಳನ್ನು ಮೇಯಿಸುತ್ತಿರುವ! ಒಂದು ಒಳ್ಳೆಯ ಕಾಯಸ್ಥ ಮನೆ-ತನದ ಹುಡುಗನು ಕಟುಕರ ಹುಡುಗಿಯನ್ನು ಮದುವೆಯಾಗಿ ಕಟುಕನಾದುದನ್ನು ನಾನು ನೋಡಿರುವೆ. ಈಗ ಅವನು ಆಕಳನ್ನು ಕೊಂದು ಅದರ ಮಾಂಸವನ್ನು ಮಾರುತ್ತಿರುವ. ಅವನನ್ನು ಈಗ ನೋಡಿ ಅವನು ಹಿಂದಕ್ಕೂ ಕಟುಕನಾಗಿರದೆ ಬೇರೆ ಜಾತಿಯವನಿದ್ದ ಎಂದು ಯಾರ ಹೇಳಬಲ್ಲರು! ಆದರೆ ಇವರೆಲ್ಲರೂ ಹೀಗೆ ಆಗುವುದಕ್ಕೆ ಒಂದೇ ಕಾರಣವುಂಟು. ಆದುದರಿಂದ ನಾನು ಸದಾ ಯೋಚಿಸುತ್ತಿರುವೆ— ಯಾವ ನಾರಿಯರು ಇಷ್ಟು ಸುಲಭವಾಗಿ ಪುರುಷನನ್ನು ಎಳೆದು ಕೆಳಗೆ ತರಬಲ್ಲರೊ ಅವರು ನಗುತ್ತ ಆಡಆಡುತ್ತ ಪುರುಷನನ್ನು ಅದೇ ರೀತಿಯಾಗಿ ಶಕ್ತಿ-ದಾನ ಮಾಡಿ— ಮೇಲಕ್ಕೆ ಏರಿಸಲಾರರೇ? ಯಾವ ಗ್ರಾಮವಾಸಿಗಳ ಸುಖ್ಯಾತಿಯನ್ನು ಹರಡಲಿಕ್ಕೆ ಈ ದಿನ ನಾನು ಪಂಚ-ಮುಖವುಳ್ಳವನಾಗಿ ಹೊರಟಿರುವೆನೊ ಕೇವಲ ಅವರಿಗೆ ಈ ಗೌರವವು ಸಿಗಬೇಕೇನು? ಅವರು ಕೇವಲ ತಮ್ಮ ಬಲದಿಂದಲೇ ಇಷ್ಟು ಬೇಗ ಕೆಳಗೆ ಇಳಿದು ಬರುತ್ತಿರುವರೇನು? ಅಂತರಾತ್ಮನಿಂದ ಅವರಿಗೆ ಇನಿತೂ ಉತ್ಸಾಹವು, ಸ್ವಲ್ಪಾದರೂ ಸಹಾಯವು ಸಿಕ್ಕುವುದಿಲ್ಲವೇನು?

ಆದರೆ, ಇರಲಿ ಬಿಡಿರಿ. ವಿಚಾರದ ಝುರಿಗೆ ಸಿಕ್ಕ ನಾನು ಬಹುಶಃ ಅನಧಿಕಾರ ಚರ್ಚೆ ಮಾಡಲು ಕುಳಿತುಕೊಳ್ಳಬಹುದು. ನನಗೆ ಈ ಒಂದು ಮಾತನ್ನು ಬರೆಯುವುದು ಅವಶ್ಯವಾಗಿರುವುದು— ನಮ್ಮ ದೇಶದ ಜನರಲ್ಲಿ ನೂರಕ್ಕೆ ತೊಂಬತ್ತರಷ್ಟು ನರನಾರಿಯರು ಹಳ್ಳಿಗಳಲ್ಲಿಯೆ ಇದ್ದುಕೊಂಡು ಮನುಷ್ಯರಾಗುವರು, ಆದುದರಿಂದ ಏನಾದರೂ ನಾವು ಮಾಡಲೇಬೇಕು. ಇರಲಿ, ಈಗ ನಾನು ಹೇಳುತ್ತಿದ್ದೆ— ಇವನು ಅದೇ ಮೃತ್ಯುಂಜಯನೆಂದು ಯಾರು ಹೇಳಬಲ್ಲರು ? ಆದರೆ, ಅವನು ನನ್ನನ್ನು ಬಹಳ ಆದರದಿಂದ ಬರಮಾಡಿಕೊಂಡು ಕುಳ್ಳಿರ ಹೇಳಿದ. ಬಿಲಾಸಿಯು ಕೆರೆಗೆ ನೀರನ್ನು ತರಲು ಹೋಗಿದ್ದಳು. ಆಕೆಯು ಬಂದು ನನ್ನನ್ನು ನೋಡಿದಳು. ಆಕೆಗೂ ಬಹಳ ಸಂತೋಷವಾಯಿತು. ಆಕೆಯು ಆಗಾಗ್ಗೆ ಎನ್ನ ತೊಡಗಿದಳು “ನೀವು ನನ್ನನ್ನು ಉಳಿಸದೆ ಹೋಗಿದ್ದರೆ ಆ ದಿನ ರಾತ್ರಿ ಅವರು ನನ್ನನ್ನು ಕೊಂದೇಹಾಕುತ್ತಿದ್ದರು. ನನಗಾಗಿಯೆ ನೀವೂ ಎಷ್ಟು ಏಟುಗಳನ್ನು ತಿಂದಿರಬಹುದೋ ಏನೊ.”

ಮಾತುಮಾತಿನಲ್ಲಿಯೆ ನಾನು ಅವರು ಮರುದಿನವೇ ಇಲ್ಲಿಗೆ ಬಂದುಬಿಟ್ಟರೆಂಬುದನ್ನು ತಿಳಿದುಕೊಂಡೆ. ಅವರು ಕ್ರಮೇಣ ಇಲ್ಲಿಯೆ ಮನೆಮಾಡಿಕೊಂಡು ಸುಖದಿಂದ ಇರುತ್ತಿರುವರು. ಸುಖದಿಂದ ಇರುವೆ ವೆಂದು ಅವರು ಹೇಳುವುದು ಅಗತ್ಯವಿರಲಿಲ್ಲ. ಅವರ ಮುಖವನ್ನು ನೋಡುತ್ತಲೆ ನಾನು ಅವರು ಸುಖದಿಂದ ಇರುವರೆಂದು ತಿಳಿದು ಕೊಂಡಿದ್ದೆ.

ಈ ದಿವಸ ಅವರು ಹಾವನ್ನು ಹಿಡಿಯಲು ಎಲ್ಲಿಗೋ ಹೋಗ ಬೇಕಾಗಿರುವುದು, ಚಂಚಗಾರ ಮೊದಲೇ ತೆಗೆದುಕೊಂಡಿರುವರು. ಅವರು ಸಿದ್ಧರಾದ ಕೂಡಲೆ ನಾನು ಅವರ ಕೂಡ ಹೊರಡಲು ಸಿದ್ಧನಾದೆ ಅತ್ಯಂತ ಆನಂದದಿಂದ. ಬಾಲ್ಯದಿಂದಲೇ ಎರಡು ವಿಷಯಗಳ ಬಗ್ಗೆ ಅಭಿರುಚಿ ಬಹಳ ಇರುವುದು– ಕಪ್ಪು ಹಾವನ್ನು ಹಿಡಿದು ಪಾಲಿಸು ವುದು ಒಂದು, ಮಂತ್ರಸಿದ್ಧಿಯನ್ನು ಪಡೆಯುವುದು ಇನ್ನೊಂದು.

ಮಂತ್ರ ಸಿದ್ಧಿಯನ್ನು ಪಡೆಯುವುದಕ್ಕೆ ಉಪಾಯವೇನೆಂಬುದು

ಇದುವರೆಗೆ ನಾನೆಷ್ಟು ಪ್ರಯತ್ನಪಟ್ಟರೂ ನನಗೆ ತಿಳಿದಿರುವುದಿಲ್ಲ. ಆದು-ದರಿಂದ ಮೃತ್ಯುಂಜಯನನ್ನು ಗುರುವನ್ನಾಗಿ ಮಾಡಿಕೊಳ್ಳುವೆನೆಂಬ ಆಸೆಯಿಂದ ನನಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಅವನು ತನ್ನ ಹೆಸರಾದ ಮಾವನ ಶಿಷ್ಯ, ಆದ್ದರಿಂದ ದೊಡ್ಡ ಮಂತ್ರವಾದಿ. ನನ್ನ ಭಾಗ್ಯ ಇಷ್ಟು ಅಕಸ್ಮಾತ್ತಾಗಿ ತೆರೆದು ಬೆಳಗುವುದೆಂಬುದನ್ನು ಯಾರು ಅರಿತಿದ್ದರು?

ಆದರೆ ಕೆಲಸವು ಬಹಳ ಕಠಿನವಾದುದು, ಅದರಲ್ಲಿ ಗಂಡಾಂತ-ರವೂ ಇರುವುದು. ಆದುದರಿಂದ ಅವರು ನನ್ನನ್ನು ತಮ್ಮ ಕೂಡ ಕರೆದು ಕೊಂಡು ಹೋಗಲು ಒಪ್ಪಲಿಲ್ಲ. ನಾನು ಮಾತ್ರ ಹಟ ಹಿಡಿದುಬಿಟ್ಟೆ. ನನ್ನನ್ನು ಒಂದು ತಿಂಗಳಲ್ಲಿ ಶ್ರೇಷ್ಠ ಮಂತ್ರವಾದಿಯನ್ನಾಗಿ ಮಾಡುವ ದಾರಿಯ ವಿನಾ ಮತ್ತಾವ ಉಪಾಯವೂ ಅವನಿಗೆ ಕಾಣದ ಹಾಗೆ ಮಾಡಿಬಿಟ್ಟೆ. ಮೃತ್ಯುಂಜಯ ನನ್ನ ತನ್ನ ಶಿಷ್ಯನನ್ನಾಗಿ ಮಾಡಿಕೊಂಡ. ಬಳಿಕ ನನಗೆ ಹಾವು ಹಿಡಿಯುವ ಉಪಾಯವನ್ನು ಹೇಳಿಕೊಟ್ಟ, ಆ ನಂತರ ನನ್ನ ಮಣಿಕಟ್ಟಿನಲ್ಲಿ ಒಂದು ಔಷಧದ ತಾಯಿತವನ್ನು ಕಟ್ಟಿ ಹಾವಾಡಿಗನನ್ನಾಗಿಯೆ ಮಾಡಿಬಿಟ್ಟ!

ಮಂತ್ರ ಏನಿದ್ದಿತು, ನಿಮಗೆ ಗೊತ್ತಿರುವುದೇನು? ಅದರ ಕೊನೆಯ ಭಾಗ ಮಾತ್ರ ನನಗೆ ನೆನಪಿರುವುದು—

"ಓರೆ ಕೇವುಟ, ತೂ ಮನಸಾಕಾ ವಾಹನ, ಮನಸಾದೇವಿ ಮೇರಿ ಮಾ— ಉಲಟಪಲಟ ಪಾತಾಲ ಫೋಡ— ಢೋಂಡಾಕಾ ವಿಷ ತೂ ಲೇಲೆ, ತೇರಾ ವಿಷ ಢೋಂಡಾಕೊ ದೇ–ದೂಧರಾಜ, ಮಣಿರಾಜ! ಕಿಸಕೀ ಆಜ್ಞಾಸೆ— ವಿಷಹರೀ ಕೀ ಆಜ್ಞಾಸೆ!"

ಇದರ ಅರ್ಥವೇನೆಂಬುದು ನನಗೆ ಗೊತ್ತಿಲ್ಲ. ಏಕೆಂದರೆ ಈ ಮಂತ್ರವನ್ನು ಹುಟ್ಟಿಸಿದ ಋಷಿ ಇದ್ದರು– ನಿಶ್ಚಯವಾಗಿಯೂ ಒಬ್ಬರಿಲ್ಲ ಒಬ್ಬರು ಇರಲೇಬೇಕು— ಆದರೆ ಅವರ ದರ್ಶನವು ಎಂದೂ ನನಗೆ ಆಗಲಿಲ್ಲ.

ಕೊನೆಗೆ ಈ ಮಂತ್ರದ ಸತ್ಯ-ಅಸತ್ಯದ ಚರಮ ಮೀಮಾಂಸೆ ಆಗಿಹೋಯಿತು; ಆದರೆ ಎಲ್ಲಿಯವರೆಗೆ ಅದು ಆಗಿರಲಿಲ್ಲವೋ ಅಲ್ಲಿಯ ವರೆಗೆ ನಾನು ಹಾವು ಹಿಡಿಯುವುದರಲ್ಲಿ ಬಹಳ ಹೆಸರು ಪಡೆದೆ. ಎಲ್ಲರೂ ಎನ್ನತೊಡಗಿದರು— "ಹೌದು, ನೈಡಾ ಗುಣೀ ಮನುಷ್ಯ. ಸಂನ್ಯಾಸಿ-ಯಾಗಿರುವಾಗ ಕಾಮಾಖ್ಯಾಕ್ಕೆ ಹೋಗಿ ಸಿದ್ಧ ಪುರುಷನಾಗಿ ಬಂದಿರುವ." ಇಷ್ಟು ಚಿಕ್ಕ ವಯಸ್ಸಿನಲ್ಲಿ ಇಷ್ಟು ದೊಡ್ಡ ಹಾವಾಡಿಗನಾದುದಕ್ಕಾಗಿ ನನ್ನ ಕಾಲುಗಳನ್ನು ಭೂಮಿಯ ಮೇಲೆ ಬೀಳಗೊಡುತ್ತಿರಲಿಲ್ಲ, ಈ ಬಗೆಯ ಪರಿಸ್ಥಿತಿಯು ನನಗೆ ಬಂದೊದಗಿತು.

ನನ್ನ ಸಿದ್ಧಿಯ ಮೇಲೆ ಇಬ್ಬರು ಮಾತ್ರ ವಿಶ್ವಾಸವಿಡಲಿಲ್ಲ. ಒಬ್ಬರು ನನ್ನ ಗುರುಗಳು— ಮೃತ್ಯುಂಜಯ. ಅವನು ಒಳಿತನ್ನೂ ಆಡುತ್ತಿರಲಿಲ್ಲ, ಕೆಡುಕನ್ನೂ ಆಡುತ್ತಿರಲಿಲ್ಲ ನನ್ನ ವಿಷಯವಾಗಿ. ಆದರೆ ಆಗಾಗ್ಗೆ ಬಿಲಾಸಿಯು ಮಾತ್ರ ನಸುನಗುತ್ತ ಎನ್ನುತ್ತಿದ್ದಳು "ಮಹಾ-ರಾಜರೇ, ಇವು ಭಯಂಕರ ಪ್ರಾಣಿಗಳು, ಇವುಗಳನ್ನು ಎಚ್ಚರಿಕೆಯಿಂದ ಅಲ್ಲಾಡಿಸುತ್ತಿರಬೇಕು, ಆಡಿಸುತ್ತಿರಬೇಕು." ನಿಜವಾಗಿಯೂ ನಾನು ವಿಷದ ಹಲ್ಲುಗಳನ್ನು ಕಿತ್ತ ಹಾವುಗಳ ಬಾಯಿಂದ ವಿಷವನ್ನು ತೆಗೆಯುವ ಕೆಲಸದಲ್ಲಿ ಹೆಚ್ಚು ಲಕ್ಷ್ಯಗೊಡುತ್ತಿರಲಿಲ್ಲ. ನನಗೇನು ಆಗುವುದು ಎಂಬ ಹೆಮ್ಮೆಯಿಂದ, ಪರಿವೆಯಿಲ್ಲದೆ ಕೆಲಸ ಮಾಡುತ್ತಿದ್ದೆ. ಅದರ ನೆನಪು ಬರುತ್ತಲೇ ಇಂದಿಗೂ ನನ್ನ ಮೈಮೇಲೆ ಮುಳ್ಳು ಬರುವುವು, ಶರೀರವು ನಡುಗತೊಡಗುವುದು.

ನಿಜವಾಗಿಯೂ ನೋಡಿದರೆ ಹಾವು ಹಿಡಿಯುವುದು ಕಠಿನ ಕೆಲಸವಲ್ಲ ಮತ್ತು ಹಿಡಿದ ಹಾವನ್ನು ಮೂರು ನಾಲ್ಕು ದಿನ ಗಡಿಗೆಯಲ್ಲಿ ಹಾಕಿಟ್ಟ ಬಳಿಕ— ಅದರ ವಿಷದ ಹಲ್ಲುಗಳನ್ನು ತೆಗೆದಿರಲಿ, ತೆಗೆಯದೆ ಇರಲಿ— ಅದು ಕಚ್ಚಲು ಬಯಸುವುದೇ ಇಲ್ಲ. ಹೆಡೆಯೆತ್ತಿ ಕಡಿಯುವ ಫಾರಸು ಮಾಡುವುದು, ಹೆದರಿಸುವುದು, ಆದರೆ ಕಡಿಯುವುದಿಲ್ಲ.

ಆಗಾಗ್ಗೆ ನಾವಿಬ್ಬರು ಗುರುಶಿಷ್ಯರ ಕೂಡ ಬಿಲಾಸಿಯು ಚರ್ಚೆ ಮಾಡುತ್ತ ಇದ್ದಳು. ಹಾವಾಡಿಗರಿಗೆ ಎಲ್ಲಕ್ಕೂ ಲಾಭದಾಯಕ

ಉದ್ಯೋಗವೆಂದರೆ ವನಸ್ಪತಿ ಮತ್ತು ಬೇರುಗಳನ್ನು ಮಾರುವುದು. ಎಂತಹ ಬೇರು ? ಅವನ್ನು ನೋಡುತ್ತಲೇ ಹಾವುಗಳು ಓಡಿ ಹೋಗಿರ ಬೇಕು. ಆದರೆ ಅದಕ್ಕೂ ಮೊದಲು ಒಂದು ಸಾಧಾರಣವಾದ ಕೆಲಸ ವನ್ನು ಮಾಡಬೇಕಾಗುವುದು. ಯಾವ ಹಾವಿಗೆ ಬೇರನ್ನು ತೋರಿಸಿ ಓಡಿಸಬೇಕಾಗಿರುವುದೊ ಅದರ ಬಾಯಿಗೆ ಮೊದಲು ಕಬ್ಬಿಣದ ಸಳಿ ಯನ್ನು ಕಾಸಿ ಬರಗುಡಿ ಕೊಟ್ಟು ಬಿಡಬೇಕು; ಆ ಮೇಲೆ ನೀವು ಅದಕ್ಕೆ ಬೇರನ್ನು ತೋರಿಸಿರಿ ಇಲ್ಲವೆ ಸಾಮಾನ್ಯವಾದ ಕಬ್ಬಿಣದ ಸಳಿಯನ್ನು ತೋರಿಸಿರಿ, ಅದು ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಓಡಿಯೆ ಹೋಗಬೇಕಾಗುವುದು. ಈ ಕೆಲಸದ ಬಗ್ಗೆ ವಿರೋಧವನ್ನು ಮಾಡುತ್ತಿ ದ್ದವಳು ಬಿಲಾಸಿ. ಆಕೆಯು ಈ ಕೆಲಸದ ಮಹಾ ವಿರೋಧಿ. ಆಕೆಯು ಮೃತ್ಯುಂಜಯನಿಗೆ ಹೇಳುತ್ತಿದ್ದಳು "ನೋಡಿರಿ, ಈ ರೀತಿಯಾಗಿ ಮೋಸ ಮಾಡಬಾರದು."

ಮೃತ್ಯುಂಜಯ ಎನ್ನುತ್ತಿದ್ದ "ಎಲ್ಲರೂ ಮಾಡುವರು. ಇದರಲ್ಲಿ ತಪ್ಪೇನು ? ದೋಷವೇನು ?"

"ಎಲ್ಲರೂ ಮಾಡಲಿ ಬಿಡಲಿ. ನಾವು ಮಾತ್ರ ಮಾಡಬಾರದು. ಊಟ–ಉಡಿಗೆಗಾಗಿ ನಮಗೇನೂ ಕೊರತೆಯಿಲ್ಲ. ನಾವೇಕೆ ಸುಮ್ಮ ಸುಮ್ಮಗೆ ಜನರಿಗೆ ಮೋಸ ಮಾಡಬೇಕು ?" ಎಂದು ಬಿಲಾಸಿಯು ಎನ್ನುತ್ತಿದ್ದಳು.

ಇನ್ನೂ ಒಂದು ಸಂಗತಿಯನ್ನು ನಾನು ನೋಡಿದ್ದೆ—ಹಾವು ಹಿಡಿಯಲು ಚಂಚಕಾರ ಕೊಡಲು ಯಾರಾದರೂ ಬಂದರೆ, ಬಿಲಾಸಿಯು ನಾನಾ ಬಗೆಯ ವಿಘ್ನಗಳನ್ನು ನಡುವೆ ತರಲು ಪ್ರಯತ್ನಿಸುತ್ತಿದ್ದಳು— ಇವೊತ್ತು ಶನಿವಾರ, ಇವೊತ್ತು ಮಂಗಳವಾರ ಎಂದು ಹೇಳುತ್ತಿದ್ದಳು. ಹೀಗೆಯೆ ತಿಥಿ ನಕ್ಷತ್ರ ಮೊದಲಾದ ಮಾತುಗಳನ್ನು ಹೇಳಿ ವಿಘ್ನಗಳನ್ನು ತರುತ್ತಿದ್ದಳು. ಮೃತ್ಯುಂಜಯ ಮನೆಯಲ್ಲಿ ಇರದಿದ್ದರೆ ತೀರಿತು, ಬಂದವರನ್ನು ಹಾಗೆಯೆ ತಿರುಗಿ ಕಳಿಸಿಬಿಡುತ್ತಿದ್ದಳು. ಆದರೆ ಮೃತ್ಯುಂಜಯ ಇದ್ದಾಗ ಮಾತ್ರ ಆಕೆಯಿಂದ ಆಗುತ್ತಿದ್ದಿಲ್ಲ. ಏಕೆಂದರೆ

ಮೃತ್ಯುಂಜಯ ರೂಪಾಯಿಯ ಮೋಹವನ್ನು ತ್ಯಜಿಸಲಿಕ್ಕೆ ಅಸಮರ್ಥ ನಾಗುತ್ತಿದ್ದ. ನನಗಂತೂ ಒಂದು ಬಗೆಯ ಚಟವಾಗಿ ಹೋಗಿದ್ದಿತು. ನಾನಾ ರೀತಿಯಾಗಿ ಅವನನ್ನು ಹುರುಪುಗೊಳಿಸುತ್ತಿದ್ದೆ. ವಾಸ್ತವಿಕ ವಾಗಿ ಇದರಲ್ಲಿ ಒಂದು ಬಗೆಯ ತಮಾಷೆ ಇದೆಯೆಂದು ನನಗೆ ಎನಿಸುತ್ತಿದ್ದಿತು, ಅಂಜಿಕೆ ಇರುವುದೆಂದು ಎನಿಸುತ್ತಿರಲಿಲ್ಲ. ಆದರೆ ಈ ಪಾಪಕ್ಕಾಗಿ ಒಂದು ದಿನ ನಾನು ಚೆನ್ನಾಗಿ ದಂಡವನ್ನು ತೆತ್ತ ಬೇಕಾಯಿತು.

ಆ ದಿನ ಊರಿಂದ ಒಂದುವರೆ ಹರದಾರಿ ದೂರದಲ್ಲಿದ್ದ ಒಬ್ಬ ಗೌಳಿಯ ಮನೆಗೆ ಹಾವು ಹಿಡಿಯಲು ಹೋಗಿದ್ದೆವು. ಬಿಲಾಸಿಯು ಯಾವಾಗಲೂ ಜೊತೆಯಲ್ಲಿರುತ್ತಿದ್ದಳು; ಈ ದಿನವೂ ಇದ್ದಳು. ಅಲ್ಲಿ ಇಲ್ಲಿ ಹುಡುಕತೊಡಗಿದೆ. ಒಂದು ಕಡೆಗೆ ಒಂದು ಪೋರಿನ ಚಿಹ್ನ ಕಾಣಿಸಿತು. ನಮ್ಮಲ್ಲಿ ಯಾರಿಗೂ ಕಾಣಿಸಲಿಲ್ಲ. ಆದರೆ ಬಿಲಾಸಿ ಎಷ್ಟಾದರೂ ಹಾವಾಡಿಗನ ಮಗಳಲ್ಲವೆ? ಆಕೆಯು ಬಾಗಿ ಕೆಲವು ಕಾಗದದ ಕೆಲವು ಚೂರುಗಳನ್ನು ಆರಿಸುತ್ತ ನನಗೆ ಹೇಳಿದಳು "ಮಹಾರಾಜರೆ, ಸ್ವಲ್ಪ ಹುಷಾರಿಯಿಂದ ಅಗೆಯಿರಿ. ಹಾವು ಒಂದೇ ಇರುವುದಿಲ್ಲ, ಜೋಡಿ ಇರುವುದು, ಇನ್ನೂ ಹೆಚ್ಚಿಗೆ ಹಾವುಗಳೂ ಇರಬಹುದು ಎಂದು ತೋರುವುದು."

ಮೃತ್ಯುಂಜಯನೆಂದ "ಇವರು ಒಂದೇ ಹಾವು ಬಂದು ಇದರಲ್ಲಿ ಸೇರಿಕೊಂಡಿರುವುದು, ಒಂದನ್ನೇ ನೋಡಿದ್ದೇವೆ ಎಂದು ಹೇಳುವರು."

ಬಿಲಾಸಿಯು ಕಾಗದವನ್ನು ತೋರಿಸುತ್ತ "ನೋಡುವುದಿಲ್ಲವೆ? ಅವು ಇಲ್ಲಿ ಇರಲು ಸ್ಥಳವನ್ನು ಮಾಡಿಕೊಂಡಿರುವುವು." ಎಂದಳು.

"ಕಾಗದದ ಚೂರುಗಳನ್ನು ಇಲಿಗಳೂ ತರಬಲ್ಲವಲ್ಲ?"

"ಇದೂ ಸಂಭವವಿರುತ್ತದೆ. ಇಲ್ಲಿ ಎರಡಂತೂ ಹಾವುಗಳು ಇದ್ದೇ ಇವೆಯೆಂದು ನಾನು ಹೇಳುವೆ."

ನಿಜವಾಗಿಯೂ ಬಿಲಾಸಿಯ ಮಾತು ಸತ್ಯವಿದ್ದಿತು. ಅತ್ಯಂತ ಮರ್ಮಾಂತಿಕವಾಗಿ ಆ ಮಾತು ಸತ್ಯವಾಗಿ ಹೊರಬಿದ್ದಿತು. ಹತ್ತು-

ಹನ್ನೆರಡು ನಿಮಿಷದಲ್ಲಿಯೆ ಒಂದು ದೊಡ್ಡ 'ಖರೀಶ–ಗೋಖುರಾ' ಎಂಬ ಹೆಸರಿನ ಕಾಳಸರ್ಪವನ್ನು ಹಿಡಿದು ಮೃತ್ಯುಂಜಯ ನನ್ನ ಕೈಗೆ ಕೊಟ್ಟ. ಅದನ್ನು ನಾನು ನಮ್ಮ ಪೆಟ್ಟಿಗೆಯಲ್ಲಿ ಮುಚ್ಚಿಟ್ಟು ಬರುವಷ್ಟ ರೊಳಗೆ ಮೃತ್ಯುಂಜಯ 'ಹಾಯ್' ಎಂದು ಉಸಿರು ಬಿಟ್ಟು ಹೊರಗೆ ಬಂದು ನಿಂತ. ಅವನ ಅಂಗೈಯ ಹಿಂಬದಿಯಿಂದ ಒಂದೇ ಸವನೆ ರಕ್ತವು ಸುರಿಯುತ್ತಿದ್ದಿತು.

ಮೊದಲು ಎಲ್ಲರೂ ಕಿಂಕರ್ತವ್ಯ ವಿಮೂಢರಾಗಿ ನಿಂತೆವು. ಕಾರಣ ವೇನಂದರೆ, ಸರ್ಪವನ್ನು ಹಿಡಿಯಲು ಹೋದಾಗ ಅದು ವ್ಯಾಕುಲವಾಗಿ ಓಡಿ ಹೋಗಲು ಯತ್ನಿಸದೆ ಹೋರಿನಲ್ಲೆ ಇದ್ದುಕೊಂಡು ಕಚ್ಚುವುದು ಎಂಬ ಕಲ್ಪನಾತೀತ ಸಂಗತಿಯನ್ನು ಜೀವನದಲ್ಲಿ ಇದೇ ಮೊದಲು ನಾನು ನೋಡಿದ್ದು. ಮರುಕ್ಷಣವೇ ಬಿಲಾಸಿಯು ಚೀರುತ್ತ ಓಡಿದಳು ಮತ್ತು ತನ್ನ ಸೆರಗನ್ನು ಹರಿದು ಅದರಿಂದ ಅವನ ಕೈಯನ್ನು ಕಟ್ಟಿದಳು. ತನ್ನ ಜೊತೆಗೆ ಎಷ್ಟು ವನಸ್ಪತಿ ಮತ್ತು ಬೇರುಗಳನ್ನು ತಂದಿದ್ದಳೊ ಎಲ್ಲವನ್ನೂ ತಿನ್ನಲು ಕೊಟ್ಟಳು. ಮೃತ್ಯುಂಜಯನ ಕೈಯಲ್ಲಿ ಅವನ ತಾಯಿತವಂತೂ ಇದ್ದೇ ಇದ್ದಿತು. ನಾನು ನನ್ನ ತಾಯಿತವನ್ನೂ ಬಿಚ್ಚಿ ಅವನ ಕೈಗೆ ಕಟ್ಟಿದೆನು. ಇನ್ನು ಅವನ ಮೈಗೆ ವಿಷವೇರಲಿಕ್ಕಿಲ್ಲ ಎಂದು ಬಗೆದಿದ್ದೆವು. ನಾನು ಆ 'ವಿಷಹರೀ ಆಜ್ಞೆ'ಯ ಮಂತ್ರವನ್ನು ಒಂದೇ ಸವನೆ ಪಠಿಸತೊಡಗಿದೆನು. ಸುತ್ತಲೂ ಜನಸಂದಣಿ ನೆರೆಯಿತು. ಹತ್ತಿರದಲ್ಲಿದ್ದ ಗುಣೀ ಜನರಿಗೆ ಸುದ್ದಿಯನ್ನು ಕೊಡಲು ಜನರನ್ನು ಓಡಿಸಲಾಯಿತು. ಬಿಲಾಸಿಯ ತಂದೆಗೂ ಸುದ್ದಿಯನ್ನು ತಿಳಿಸಲು ಒಬ್ಬ ಮನುಷ್ಯನನ್ನು ಕಳಿಸಲಾಯಿತು.

ನಾನು ಎಡೆಬಿಡದೆ ಮಂತ್ರವನ್ನು ಪಠಿಸತೊಡಗಿದ್ದೆನು. ಆದರೆ ಅದರ ಪರಿಣಾಮವೇನೂ ಆಗದಿದ್ದುದು ಕಾಣಿಸಿತು, ಆದಾಗ್ಯೂ ಮಂತ್ರೋಚ್ಚಾರಣೆಯು ಸಾಗಿದ್ದಿತು. ಆದರೆ, ಹದಿನೈದು ಇಪ್ಪತ್ತು ನಿಮಿಷಗಳಾದ ಮೇಲೆ ಮೃತ್ಯುಂಜಯ ಒಮ್ಮೆ ವಮನ ಮಾಡಿಕೊಂಡು ಮೂಗಿನ ದನಿಯಿಂದ ಮಾತಾಡತೊಡಗಿದ ಕೂಡಲೆ ಬಿಲಾಸಿಯು

ಒಮ್ಮೆಗೇ 'ಧಡಂ' ಎಂದು ಭೂಮಿಯ ಮೇಲೆ ಬಿದ್ದುಬಿಟ್ಟಳು. ನಾನೂ ನನ್ನ ಮಂತ್ರದ ಶಕ್ತಿಯು ಇನ್ನು ನಿರುಪಯೋಗಿಯಾದುದು ಎಂದು ತಿಳಿದುಕೊಂಡೆ.

ಸಮೀಪದಲ್ಲಿದ್ದ ಹಳ್ಳಿಗಳ ಮೂರು ನಾಲ್ಕು ಜನ ಹೆಸರಾದ ಹಾವಾಡಿಗರೂ ಬಂದರು. ನಾವು ಪ್ರತ್ಯೇಕವಾಗಿಯೂ ಒಟ್ಟುಗೂಡಿಯೂ ಮೂವತ್ತುಮೂರು ಕೋಟಿ ದೇವತೆಗಳನ್ನು ಸ್ತುತಿಸತೊಡಗಿದೆವು. ಆದರೆ ವಿಷವು ಯಾರ ಕೃಪೆಯಿಂದಲೂ ಅನುಗ್ರಹದಿಂದಲೂ ಇಳಿಯಲಿಲ್ಲ. ರೋಗಿಯ ಸ್ಥಿತಿಯು ಕೆಡುತ್ತ ಸಾಗಿತು. ಬಳಿಕ ಮೂರು ನಾಲ್ಕು ಜನ ಹಾವಾಡಿಗರು ವಿಷವನ್ನು ಅತ್ಯಂತ ಹೇಯವಾದ ಭಾಷೆಯಲ್ಲಿ ಬಯ್ಯ ತೊಡಗಿದರು. ವಿಷಕ್ಕೆ ಕಿವಿಗಳು ಇದ್ದಿದ್ದರೆ ಅದು ರೋಗಿಯನ್ನಷ್ಟೇ ಏಕ ದೇಶವನ್ನೇ ಬಿಟ್ಟು ಓಡಿ ಹೋಗಬೇಕಾಗಿದ್ದಿತು. ಆದರೆ ಯಾರಿಂದಲೂ ಏನನ್ನೂ ಮಾಡಲಿಕ್ಕಾಗಲಿಲ್ಲ. ಮತ್ತೆ ಅರ್ಧ ಗಂಟೆಯ ಕಾಲವು ಕಳೆದ ಬಳಿಕ ರೋಗಿಯು ತನ್ನ ತಂದೆಯಿಂದ ತಾಯಿಯಿಂದ ಇಡಲ್ಪಟ್ಟ ಮೃತ್ಯುಂಜಯ ಎಂಬ ಹೆಸರನ್ನೂ, ತನ್ನ ಮಾವನು ಕೊಟ್ಟ ಮಂತ್ರೋಪದೇಶ ಮತ್ತು ಔಷಧಿಗಳನ್ನೂ ಮಿಥ್ಯೆಯೆಂದು ಸಪ್ರಮಾಣ ಸಿದ್ಧಮಾಡಿ ತೋರಿಸಿ ಇಹಲೋಕದ ಯಾತ್ರೆಯನ್ನು ಮುಗಿಸಿದನು. ಬಿಲಾಸಿಯು ತನ್ನ ಪತಿಯ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟು ಕೊಂಡು ಕುಳಿತಿದ್ದಳು ಕಲ್ಲಿನ ಮೂರುತಿಯಂತೆ.

ಹೋಗಲಿ ಬಿಡಿರಿ, ಬಿಲಾಸಿಯು ದುಃಖದ ಕತೆಯನ್ನು ಇನ್ನು ಬೆಳೆಯಿಸುವ ಇಚ್ಛೆ ನನಗಿಲ್ಲ. ಆದರೆ ಇಷ್ಟೇ ಹೇಳಿ ನಾನು ಮುಗಿಸ ಬೇಕೆಂದಿರುವೆ— ಏಳು ದಿನಕ್ಕಿಂತ ಹೆಚ್ಚು ದಿನ ಬದುಕಿರುವುದು ಆಕೆಗೆ ಸಹ್ಯವಾಗಲಿಲ್ಲ. ಆಕೆಯು ಒಂದು ದಿನ ನನಗೆ ಕೇವಲ ಇಷ್ಟೇ ಹೇಳಿದ್ದಳು "ಮಹಾರಾಜರೇ, ನನ್ನಾಣೆಯಾಗಿದೆ, ಇನ್ನು ನೀವು ಇನ್ನೆಂದಿಗೂ ಈ ಕೆಲಸವನ್ನು ಮಾಡಬೇಡಿರಿ.'

ನಾನು ನನ್ನ ತಾಯಿತ ಮತ್ತು ಕವಚಕ್ಕೆ ಮೃತ್ಯುಂಜಯನ ಸಂಗಡ ಮಣ್ಣು ಕೊಟ್ಟುಬಿಟ್ಟಿದ್ದೆ. ಕೇವಲ 'ವಿಷಹರಿಯ ಅಜ್ಞೆ'

ಒಂದು ಮಾತ್ರ ಉಳಿದಿದ್ದಿತು. ಆದರೆ ಆ ಆಜ್ಞೆಯು ಯಾವ ನ್ಯಾಯಾಧೀಶನ ಆಜ್ಞೆಯೂ ಅಲ್ಲ ಮತ್ತು ಸರ್ಪದ ವಿಷವು ಹಿಂದುಸ್ತಾನೀ ಜನರ ವಿಷವಲ್ಲ— ಎಂಬ ಮಾತನ್ನು ನಾನೂ ಅರಿತುಕೊಂಡಿದ್ದೆ.

ಒಂದು ದಿನ ಕೇಳಿದೆ— ಮನೆಯಲ್ಲಿ ವಿಷದ ಕೊರತೆಯೇನೂ ಇರಲಿಲ್ಲ– ಬಿಲಾಸಿಯು ಆತ್ಮಹತ್ಯೆಯನ್ನು ಮಾಡಿಕೊಂಡಿರುವಳು ಮತ್ತು ಶಾಸ್ತ್ರಕ್ಕನುಸಾರವಾಗಿ ಅವಳು ನಿಶ್ಚಯವಾಗಿಯೂ ನರಕಕ್ಕೆ ಹೋಗಿರುವಳು. ಆದರೆ ಅವಳು ಎಲ್ಲಿಗೇ ಹೋಗಿರಲಿ, ಆದರೆ ನನ್ನದೂ ಹೋಗುವ ಸಮಯವು ಬಂದಾಗ ನಾನು ಅಂತಹದೇ ಒಂದು ನರಕಕ್ಕೆ ಹೋಗುವೆನೆಂಬ ಗೊತ್ತುವಳಿಯನ್ನು ಯಮರಾಯನ ಮುಂದೆ ಇಡಲು ಹಿಂದು–ಮುಂದು ನೋಡುವುದಿಲ್ಲ ಎಂದು ಹೇಳುವೆ.

ಕಕ್ಕಂದಿರು ಇಡೀ ತೋಟದ ಮೇಲೆ ತಮ್ಮ ಅಧಿಕಾರವನ್ನು ಕೂಡಿಸಿ ಅತ್ಯಂತ ಜ್ಞಾನಿಗಳಂತೆ ನಾಲ್ಕೂ ಕಡೆಗೆ ಹೇಳುತ್ತ ತಿರುಗಾಡ ತೊಡಗಿದರು " ಇಂತಹ ಅಪಘಾತದಿಂದ ಮೃತ್ಯುಂಜಯನ ಮೃತ್ಯುವು ಆಗದಿದ್ದರೆ ಇನ್ನಾರದಾಗಬೇಕು ? ಗಂಡುಸು ಅಂತಹದೊಂದು ಕೆಲಸವನ್ನು ಬಿಟ್ಟು ಬೇಕಾದುದನ್ನು ಮಾಡಲಿ, ಅದರಿಂದ ಯಾವ ಕೆಡಕೂ ಆಗುವುದಿಲ್ಲ! ಬಹಳವಾದರೆ ನಿಂದೆಯಾಗುವುದು ಅಷ್ಟೆ. ಆದರೆ, ಆಕೆಯ ಕೈಯಿಂದ ಅನ್ನವನ್ನು ಉಂಡು ಏಕೆ ಮೃತ್ಯುವನ್ನು ಕರೆದುಕೊಂಡನೊ ? ತಾನಷ್ಟೇ ಸಾಯಲಿಲ್ಲ, ನನ್ನ ತಲೆಯನ್ನೂ ತಗ್ಗಿಸಿ ಹೋದ. ದಾಹಕರ್ಮ ಮಾಡುವವರಿಲ್ಲ, ತಿಲತರ್ಪಣ ಬಿಡುವವರೂ ಉಳಿಯಲಿಲ್ಲ. ಶ್ರಾದ್ಧ–ಶಾಂತಿ ಏನೂ ಆಗಲಿಲ್ಲ."

ಊರಿನವರು ಒಂದೇ ದನಿಯಿಂದ ಎನ್ನತೊಡಗಿದರು " ಇದರಲ್ಲಿ ಏನು ಸಂದೇಹ! ಅನ್ನ–ಪಾಪ! ಇದಕ್ಕೇನಾದರೂ ಪ್ರಾಯಶ್ಚಿತ್ತವಿರುವುದೇನು!"

ಬಿಲಾಸಿಯ ಆತ್ಮಹತ್ಯೆಯೂ ಎಷ್ಟೋ ಜನರಿಗೆ ಪರಿಹಾಸ್ಯದ ವಿಷಯವಾಗಿಹೋಯಿತು. ನಾನು ಯೋಚಿಸುವೆ— ಇಬ್ಬರೂ ಆ ಅಪ-ರಾಧವನ್ನು ಮಾಡಿರಬಹುದು.— ಆದರೆ, ಮೃತ್ಯುಂಜಯ ಹಳ್ಳಿಯ

ಹುಡುಗನೇ ಆಗಿದ್ದ; ಹಳ್ಳಿಯ ಜಲವಾಯುವಿನಿಂದಲೇ ಇಷ್ಟು ದೊಡ್ಡವ ನಾಗಿದ್ದ. ಆದಾಗ್ಯೂ ಯಾವ ವಸ್ತುವು ಅವನನ್ನು ಈ ದುಃಸಾಹಸದ ಕೆಲಸಕ್ಕೆ ಪ್ರವೃತ್ತನನ್ನಾಗಿ ಮಾಡಿತು ಎಂಬುದನ್ನು ಯಾರೂ ಕಣ್ತೆರೆದು ನೋಡಲೇ ಇಲ್ಲ!

ನನಗೆ ಹೀಗೆ ಎನಿಸುವುದು— ಯಾವ ದೇಶದ ನರನಾರಿಯರಲ್ಲಿ ಪರಸ್ಪರ ಹೃದಯವನ್ನು ಗೆದ್ದು ವಿವಾಹ ಮಾಡಿಕೊಳ್ಳುವ ಪದ ತಿಯು ಇಲ್ಲವೊ— ಆದರೆ ನಿಂದೆಯ ವಸ್ತುವಾಗಿದೆಯೊ, ಯಾವ ದೇಶದ ನರನಾರಿಯರು ಆಸೆಯ ಸೌಭಾಗ್ಯ, ಆಕಾಂಕ್ಷೆಯ ಭಯಂಕರ ಆನಂದ ದಿಂದ ಚಿರಕಾಲ ವಂಚಿತರಾಗಿರುವರೊ, ಯಾರಿಗೆ ವಿಜಯದ ಬಗ್ಗೆ ಗರ್ವ ಮತ್ತು ಪರಾಜಯದ ಬಗ್ಗೆ ವ್ಯಥೆ ಇವುಗಳಲ್ಲಿ ಯಾವುದೊಂದ ನ್ನಾದರೂ ತಮ್ಮ ಜೀವನದಲ್ಲಿ ಅನುಭವಿಸುವಷ್ಟು ಶಕ್ತಿಯಿಲ್ಲವೊ, ಯಾರಿಗೆ ತಪ್ಪು ಮಾಡಿದುದಕ್ಕಾಗಿ ದುಃಖ ಮತ್ತು ತಪ್ಪು ಮಾಡದೆ ಇದ್ದುದಕ್ಕಾಗಿ ಆತ್ಮಾನಂದ ಪಡುವುದು ಶಕ್ಯವಿಲ್ಲವೊ, ಯಾರ ಪ್ರಾಚೀನ ಮತ್ತು ಬಹುದರ್ಶಿ ವಿಜ್ಞ ಸಮಾಜವು ಅತ್ಯಂತ ಎಚ್ಚರಿಕೆಯಿಂದ ದೇಶದ ಜನರನ್ನು ಎಲ್ಲ ಬಗೆಯ ಹಂಗಾಮುಗಳಿಂದ ಬೇರ್ಪಡಿಸಿ ಇಡಿ ಜೀವಮಾನವೆಲ್ಲ ಒಳ್ಳೆಯ ಮನುಷ್ಯನಾಗಿ ಇರಲಿಕ್ಕೆ ವ್ಯವಸ್ಥೆ ಮಾಡಿ ದೆಯೊ ಮತ್ತು ಇದರಿಂದಾಗಿ ವಿವಾಹವು ಕೇವಲ ಒಂದು ಕಂಟ್ರಾಕ್ಟ (Contract) ಆಗಿರುವುದೊ ಹಾಗೂ ವೈದಿಕ ಮಂತ್ರದಿಂದ ಗಟ್ಟಿಯಾದ ಪುರಾವೆ— ಡಾಕ್ಯುಮೆಂಟ (Document) ಆಗಿರುವುದೊ ಆ ದೇಶದ ಜನರಿಗೆ ಮೃತ್ಯುಂಜಯನ ಅನ್ನಪಾಪದ ಕಾರಣವನ್ನು ತಿಳಿದುಕೊಳ್ಳು ವಷ್ಟು ಶಕ್ತಿಯಿಲ್ಲ. ಬಿಲಾಸಿಯ ಬಗ್ಗೆ ಪರಿಹಾಸ ಮಾಡಿದವರೆಲ್ಲರೂ ಸಭ್ಯಗೃಹಸ್ಥರು; ಗೃಹಿಣಿಯರು. ಅವರೆಲ್ಲರಿಗೂ ಅಕ್ಷಯವಾದ ಸತಿ-ಲೋಕವು ಸಿಗುವುದೆಂಬುದನ್ನು ನಾನು ಬಲ್ಲೆ; ಆದರೆ ಆ ಹಾವಾಡಿಗನ ಮಗಳು ಒಬ್ಬ ಪೀಡಿತ ಮತ್ತು ಹಾಸುಗೆ ಹಿಡಿದ ರೋಗಿಯನ್ನು ಇನಿತು ಇನಿತಾಗಿ ಗೆಲ್ಲುತ್ತಿದ್ದಾಗಿನ ಗೌರವವನ್ನು .ಇಂದಿನ ವರೆಗೆ ಅವರಲ್ಲಿ ಯಾರೂ ತಮ್ಮ ಕಣ್ಣಿಂದ ನೋಡಿಲ್ಲ. ಮೃತ್ಯುಂಜಯ ಬಹಳ ತುಚ್ಛ

ಮನುಷ್ಯನಾಗಿರಬಹುದು; ಆದರೆ ಅವನ ಹೃದಯವನ್ನು ಗೆದ್ದು ಅದರ ಮೇಲೆ ತನ್ನ ಅಧಿಕಾರವನ್ನು ಕೂಡಿಸುವುದರಿಂದ ಆಗುವ ಆನಂದವು ತುಚ್ಛವಾಗಿರಲಿಲ್ಲ, ಆಕೆಯ ಈ ಆನಂದದ ಸಂಪತ್ತು ಸಾಮಾನ್ಯ ವಾದುದಿರಲಿಲ್ಲ !

ಈ ದೇಶದ ಜನರಿಗೆ ಇದನ್ನು ಅರಿತುಕೊಳ್ಳುವುದೇ ಕಷ್ಟವಾಗಿದೆ. ನಾನು ಭೂದೇವ ಮುಕರ್ಜಿ ಅವರ 'ಪಾರಿವಾರಿಕ ನಿಬಂಧ'ಗಳಿಗೂ ದೋಷವನ್ನು ಕೊಡುವುದಿಲ್ಲ ಮತ್ತು ಶಾಸ್ತ್ರೀಯ ಹಾಗೂ ಸಾಮಾಜಿಕ ವಿಧಿ-ವಿಧಾನಗಳ ನಿಂದೆಯನ್ನೂ ಮಾಡುವುದಿಲ್ಲ. ಒಂದು ವೇಳೆ ನಾನು ಮಾಡಿದರೆ, ನನಗೆ ಅವರು ಉತ್ತರರೂಪವಾಗಿ ಹೇಳುವರು—"ಈ ಹಿಂದೂ ಸಮಾಜವು ತನ್ನ ವಿಧಿ-ವಿಧಾನಗಳ ಬಲದಿಂದಲೇ ಇಷ್ಟು ಶತಮಾನಗಳ ವರೆಗೆ, ಅದರ ಮೇಲೆ ಭಯಂಕರವಾದ ದಾಳಿಗಳಾದರೂ ಇನ್ನೂವರೆಗೆ ಜೀವಿಸಿರುವುದು.'' ಹೀಗೆನ್ನುವವರ ಪ್ರತಿಯಾಗಿಯೂ ನಾನು ಭಕ್ತಿಯನ್ನು ವ್ಯಕ್ತಗೊಳಿಸುವೆ. ಆದರೆ ಅವರಿಗೆ ಪ್ರತ್ಯುತ್ತರವಾಗಿ "ಜೀವಿಸಿ ಇರುವುದಷ್ಟೇ ಅಂತಿಮ ಧ್ಯೇಯ'' ಎಂದು ನಾನೆಂದಿಗೂ ಹೇಳಲಾರೆ. ಮಹಾಕಾಯದ ಆನೆಗಳು ಕೂಡ ನಾಯವಾಗಿ ಹೋಗಿರುವುವು, ಚಿಕ್ಕಚಿಕ್ಕ ಜಿಟ್ಟೆ ಮೊದಲಾದುವುಗಳು ಜೀವಿಸಿರುವುವು. ನಾನು ಕೇವಲ ಇಷ್ಟೇ ಹೇಳುವೆ "ದೊಡ್ಡ ಮನುಷ್ಯರ ಮುದ್ದು ಮಕ್ಕಳಂತೆ ಹಗಲು-ರಾತ್ರಿ ತಮ್ಮ ಕಣ್ಣೆದುರಿಗೇ, ತೊಡೆಯ ಮೇಲೆ ಇಟ್ಟುಕೊಳ್ಳುವುದರಿಂದ ಹಿಂದೂ ಸಮಾಜವು ಚೆನ್ನಾಗಿರುವುದೇನೊ ನಿಜ,— ಆದರೆ ಅವನ್ನು ಜಿಟ್ಟೆಗಳಂತೆ ಬದುಕಿಸಿ ಇಡುವುದಕ್ಕಿಂತ ಒಂದು ವೇಳೆ ಅವನ್ನು ತೊಡೆಯಮೇಲಿಂದ ಇಳಿಸಿ, ಅನ್ಯರ ಮಕ್ಕಳಂತೆ ಅದಕ್ಕೆ ನಾಲ್ಕೈದು ಹೆಜ್ಜೆ ನಡೆಯಲಿಕ್ಕೆ ಕೊಟ್ಟರೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಯೋಗ್ಯವಾದ ಪಾಪವನ್ನು ಮಾಡಿದಂತಾಗಲಿಕ್ಕಿಲ್ಲ.''

# ಪ್ರತಿಭಾಗ್ರಂಥಮಾಲಾ, ಧಾರವಾಡ.

**ಆರಂಭ ೨೫—೩—೪೪** ( ಯುಗಾದಿಪ್ರತಿಪದೆ )

ಯುಗಾದಿಯಿಂದ ಯುಗಾದಿಯವರೆಗೆ ಎಂಟು ಪುಸ್ತಕಗಳು

**ವಾರ್ಷಿಕ ಚಂದಾ ೮ ರೂ. ಮಾತ್ರ**

**( ರಜಿಸ್ಟರ್ ವೆಚ್ಚ ಸೇರಿ ೯ ರೂ. )**

ಪುಸ್ತಕಗಳು ಸುರಕ್ಷಿತವಾಗಿ ಮುಟ್ಟಬೇಕಾಗಿದ್ದರೆ ರಜಿಸ್ಟರ್ ಮೂಲಕವೇ ತರಿಸಿರಿ!

## ಪ್ರಕಟವಾದ ಗ್ರಂಥಗಳು

೧ **ಘಾಟಿಯ ಮುದುಕ ಮತ್ತು ಇತರ ಕತೆಗಳು** (ದೇವುಡು) ೧—೮—೦

೨ **ರಾಜಲಕ್ಷ್ಮಿ** (ಶರತ್ ಬಾಬು) ಶ್ರೀ. ಗುರುನಾಥ ಜೋಶಿ ೧—೮—೦

## ಮುಂಬರುವ ಹೊತ್ತಿಗೆಗಳು

**ಜೊತೆಗಾತಿ**— ಶ್ರೀ. ಕಟ್ಟಿಮನಿಯವರಿಂದ (ಕಾದಂಬರಿ) ೧—೮—೦

**ಚಿತ್ತ ಭ್ರಾಂತಿ**— ಶ್ರೀ. ಕೋ. ಶಿ. ಕಾರಂತ (ಕಾದಂಬರಿ)

ಶ್ರೀ ಶಿಡ್ಲಘಟ್ಟದ ಹಳ್ಳಿ ಕೃಷ್ಣಶರ್ಮರ ಸುಂದರ ಕಾದಂಬರಿ

ಶ್ರೀ. ಆನಂದಕಂದರ ಸಾಮಾಜಿಕ ಕಾದಂಬರಿ

ಪ್ರೊ. ನಾ. ಸಿ. ಫಡಕೆ ಎಂ. ಎ. ಅವರ ಕ್ರಾಂತಿಕಾರಿ ಕಾದಂಬರಿ.

ಇತ್ಯಾದಿ— — ಇತ್ಯಾದಿ— —

ವಾರ್ಷಿಕ ಪ್ರವೇಶ ನಿಧಿ ೧ ರೂ. ಕಳಿಸಿಯೂ ಚಂದಾದಾರ ಆಗಬಹುದು. ಇಂಥವರಿಗೆ ಪ್ರತಿ ಪುಸ್ತಕವನ್ನು (ವಿ. ಪಿ. ವೆಚ್ಚ ಸೇರಿ) ೧—೪—೦ ಗೆ ವಿ. ಪಿ. ಮಾಡಲಾಗುವುದು.